# ಮುನ್ನುಡಿ

ಪ್ರತಿಯೊಂದು ಪುಸ್ತಕಕ್ಕೂ ಮುನ್ನುಡಿ ಒಂದು ಶೋಭಿಸುವ ಲೇಖನ. ಸರ್ವಾಲಂಕಾರ ಭೂಷಿತಳಾದ ನವ ಯುವತಿಗೆ ಹಣೆಯಲ್ಲಿ ಕುಂಕುಮ ವನ್ನಿಟ್ಟಾಗ ಹೇಗೆ ವಿರಾಜಮಾನವಾಗಿ ಶೋಭಿಸುವುದೋ ಹಾಗೆ, ಕೃತಿಯ ಲೇಖಕನ ಮನೋ ನಿರ್ಧಾರ ಮತ್ತು ಅಂತರ್ ಭಾವನೆಗಳನ್ನು ನಿರ್ಲಿಪ್ತವಾಗಿ ಹೊರ ಹೊಮ್ಮಿಸುವ ಲೇಖನವೇ ಮುನ್ನುಡಿ. ಕೃತಿಯನ್ನು ಓದುವ ಮುನ್ನ ಮುನ್ನುಡಿಯನ್ನು ಅವಲೋಕಿಸಿದರೆ ಸಣ್ಣ ಪುಟ್ಟ ಸಾರಾಂಶಗಳೂ ಓದುಗರ ಮನಸ್ಸಿಗೆ ಗ್ರಹಣವಾಗುತ್ತದೆ.

ಇದು ನನ್ನ ಮೊದಲನೆಯ ಕಾದಂಬರಿ. ಮನೆಗೆಬಂದ ಮುತ್ತೈದೆಯು ಸಜೀವವಾಗಿ ಲೇಖನಾ ಸಾಮಗ್ರಿಯೊಡನೆ ಪುಸ್ತಕ ಪ್ರಪಂಚದಲ್ಲಿ ಕಣ್ಣು ತೆರೆದು ಈಗಾಗಲೇ ಆರು ತಿಂಗಳಾಗಿ ಹೋಗಿದೆ. ಆದರೆ ಅವಳ ಬಾಳ್ವೆ ಕೇವಲ ಎಲೆಯ ಮರೆಯ ಹೂವಿನಂತೆ ಅಂಧಕಾರಮಯವಾಗಿತ್ತು. ಅರಣ್ಯ ದಲ್ಲಿ ಬೆಳೆದ ಸುಂದರ ಪುಷ್ಪದಂತೆ, ತನ್ನ ಕೈಲಾದಷ್ಟು ಸುಗಂಧವನ್ನು ಬೀರುತ್ತಿದ್ದರೂ ಸಹ ಅದನ್ನು ಕಿತ್ತು ಮುಡಿಯುವವರು ಇನ್ನೂ ಬಂದಿರಲಿಲ್ಲ. ಆದರೆ ಈ ಮುತ್ತೈದೆಯ ಕುಂಕುಮ ಭಾಗ್ಯವೋ ಏನೋ, ಅದೃಷ್ಟ ವಶಾತ್ ಕೆ. ವಿ. ಎಸ್. ಪಬ್ಲಿಕೇರ್ಷನ್ನಿನ ಪ್ರಕಾಶಕರು ಮುಂದೆ ಬಂದು ಬಹು ದಿವಸಗಳ ಪುಷ್ಪದ ಕೊರಗನ್ನು ನಿವಾರಿಸಲೆತ್ನಿಸಿದರು.

ಸಾಹಿತ್ಯ ದೇಗುಲದಲ್ಲಿ ಸರಸ್ವತಿ ದೇವಿಯನ್ನು ಸೇವಿಸಲು ಅನೇಕ ಭಕ್ತರು ಅವಳಿಗಾಗಿ ಕಾಯುತ್ತಿದ್ದಾರೆ. ಇನ್ನೂ ಬೆಳಕಿಗೆ ಬಾರದ, ತೆರೆಯ ಮರೆಯ ಹಿಂದಿರುವ ಎಷ್ಟೋ ಜನ ಅನುಪಮ ಲೇಖಕರು ಇದ್ದಾರೆ. ಆದರೆ ಅವರು ಗೋಚರಿಸದೆ ಇರುವವನು ಓದುಗರಾದ ನೀವುಗಳೇ ಕಾರಣ. ಇಂಗ್ಲೀಷ್ ಭಾಷೆಯನ್ನು ಓದಿದ ನಾವುಗಳ ಅದರಲ್ಲಿ ಹೇಳುವ ನಾಗರೀಕತೆಯ ಅಂತರಂಗವನ್ನು ಅರ್ಥ ಮಾಡಿಕೊಳ್ಳದೆ ಇರುವುದೇ ಕಾರಣ. ಕನ್ನಡ ಭಾಷೆಗೂ ಇಂಗ್ಲೀಷ್ ಭಾಷೆಗೂ ಹೋಲಿಸಿ ನೋಡಿ ಜನಗಳು ಸರಿಯಾದ ತಿಳುವಳಿಕೆಯಿಲ್ಲದೆ ಕನ್ನಡದಲ್ಲೇನಿದೆ ಎಂದುಕೊಂಡಿದ್ದೇವೆ. ಖಂಡಿತ ನಾವು

ಕನ್ನಡದ ಒಳಹೊಕ್ಕು ನೋಡಿದರೆ ನಾವು ಹಾಗೆನ್ನಲಾರೆವು. ಕನ್ನಡದ ಸೇವೆ ಮಾಡಿ ಭಾಷಾ ಪ್ರಾಮುಖ್ಯತೆಯನ್ನು ಸಾರಿ ಅದರ ಬಾವುಟವನ್ನು ಎತ್ತಿ ಹಿಡಿಯುವುದೇ ನಮ್ಮ ಕರ್ತವ್ಯ! ಕನ್ನಡ ಪುಸ್ತಕಗಳನ್ನು ಓದದೆ ಇರುವುದೇ ಕನ್ನಡದ ಹೊಸ ಲೇಖಕರು ಬೆಳಕಿಗೆ ಬಾರದಿರುವುದಕ್ಕೆ ಕಾರಣ. ಪುಸ್ತಕಗಳನ್ನು ಕೊಂಡು ಓದಿ ಅರ್ಥ ಮಾಡಿಕೊಂಡಲ್ಲಿ ಲೇಖಕನಿಗೆ ಸರಿಯಾಗಿ ಉತ್ತೇಜನ ದೊರೆತು ಮುಂದುವರಿಯುತ್ತಾನೆ.

ಆಗ ಲೇಖಕನಿಗೆ ಸ್ಫೂರ್ತಿ ಒದಗಿ ಸಾಹಿತ್ಯರಂಗದಲ್ಲೇ ಆಚಂದ್ರಾರ್ಕ ವಾಗಿ ಬೆಳಗುವಂತಹ ಕೃತಿಯನ್ನು ರಚಿಸಲಾರನೆ? ಮುಖ್ಯವಾಗಿ ಸಾಹಿತ್ಯಕ್ಕೆ ಉತ್ತೇಜನ ಕೊಟ್ಟಲ್ಲಿ ಅದೊಂದು ನಾಡ ಸೇವೆಯಂತೆ. ಪುಸ್ತಕಗಳು ಖರ್ಚಾದಹಾಗೆಲ್ಲಾ ಪ್ರಕಾಶಕರಿಗೆ ಯಶಸ್ಸು ಒದಗಿ ಹೊಸ ಹೊಸ ಲೇಖಕ ರನ್ನು ಮುಂದು ತರುವುದಕ್ಕೆ ಪ್ರಯತ್ನಪಡುವರು. ಹಾಗೆ ನಾವು ಮಾಡಿದಲ್ಲಿ ನಮ್ಮ ಮನ ಪ್ರಫುಲ್ಲಿತಗೊಳ್ಳುವುದು; ನಾಡು ಬೆಳಗುವುದು; ಕೃತಿ ಅಮರ ವಾಗಬಲ್ಲುದು.

ಈ ಕಾದಂಬರಿಗೆ ನೀವು ಉತ್ತೇಜನ ಕೊಟ್ಟಂತೆಯೇ ಈ ಬಡ ಲೇಖಕ ನನ್ನ ಸಾಹಿತ್ಯದ ಪಾವಟಿಗೆಗಳ ಮೇಲೆ ಕೈ ಹಿಡಿದು ನಿಧಾನವಾಗಿ ನಡೆಸಿ ಕೊಂಡು ಹೋದರೆ ಅಖಿಲ ಓದುಗರಿಗೂ ಚಿರ ಋಣಿ.

ಕಡೆಯದಾಗಿ ಈ ಕಾದಂಬರಿಯನ್ನು ಕೃಪೆಯಿಂದ ಪ್ರಕಟಿಸಿ ಪ್ರಕಾಶಿಸಿದ ಕೆ. ವಿ. ಎಸ್. ಪಬ್ಲಿಕೇಷನ್ಸ್‌ಗೆ ನಾನು ಚಿರಋಣಿ. ಜನ್ಮ ಜನ್ಮಾಂತರದಲ್ಲೂ ಮರೆಲಾರದ ಮಹೋಪಕಾರ. ಈ ಕೃತಿಯನ್ನು ಪ್ರಕಟಿಸಲು ಉತ್ತೇಜನ ಕೊಟ್ಟು ಮುನ್ನುಗ್ಗಲು ಪ್ರೇರೇಪಿಸಿದ ನನ್ನ ಸಮಸ್ತ ಮಿತ್ರರುಗಳಿಗೆ ನನ್ನ ಅಭಿಮಾನಪೂರ್ವಕ ವಂದನೆಗಳು.

ಮುನ್ನುಡಿಯ ಅಂತ್ಯದೊಡನೆ ನನ್ನ ಲೇಖನಿಗೆ ಸ್ವಲ್ಪ ಕಾಲ ವಿಶ್ರಾಂತಿ ಯನ್ನು ಕೊಡಲಿಚ್ಛಿಸುವೆನು.

ಲೇಖಕ

ಬೆಂಗಳೂರು. **ಶ್ರೀ ಸೂರ್ಯನಾರಾಯಣಮೂರ್ತಿ.**

# ೧

ನೆರೆಮನೆ ಪಾರ್ವತಮ್ಮನವರ ಮನೆಯಿಂದ ಘಂಟೆಯ ಶಬ್ದ ಕೇಳಿ ಬಂತು. ಒಂದು, ಎರಡು, ಮೂರು, ನಾಲ್ಕು....ಹನ್ನೊಂದು, ಹನ್ನೆರಡು.

ನಿದ್ರೆ ತುಂಬಿದ ಕಣ್ಣುಗಳಿಂದ ಹೊರಗೆ ಕಿಟಕಿಯಲ್ಲಿ ಇಣಿಕಿ ನೋಡಿ ದಳು ಸಾವಿತ್ರಿ. ಕತ್ತಲೆ ಹೊರಗೆ ಬೃಹದಾಕಾರದಲ್ಲಿ ತಾಂಡವವಾಡುತ್ತಿತ್ತು. ಮನೆಯ ಮುಂದೆ ಇದ್ದ ಒಂದು ದೀಪದ ಕಂಬವೂ ತಣ್ಣಗಾಗಿತ್ತು. ಮಳೆ ಆಗತಾನೆ ತುಂತುರು ತುಂತುರಾಗಿ ಬೀಳಲಾರಂಭಿಸಿತ್ತು. ಹೊರಗಿನ ದೀಪ ಆರಿಹೋಗಿತ್ತು. ನಿಶ್ಶಬ್ದತೆ ತಾನೇ ತಾನಾಗಿತ್ತು. ಆಗಲೇ ಘಂಟೆ ಹನ್ನೆ ರಡು. ಮನೆ ಮನೆಗಳಲ್ಲೂ ಬೆಚ್ಚಗೆ ಜನರು ಮಲಗಿದ್ದಿರಬಹುದು. ಬೀದಿಯಲ್ಲಿ ಜನರೂ ಕೂಡ ಓಡಾಡುತ್ತಿಲ್ಲ. ಹೊರಗೆ ಕೇಳಲು ಒಂದು ಶಬ್ದವಾದರೂ ಇಲ್ಲ. ಮಳೆ ಗಾಳಿಗೆ ಬಿದಿರು ಅಡ್ಡಾದಿಡ್ಡಿ ಯಾಗಿ ಅಲುಗುತ್ತಿದ್ದ ಮರಗಳ ಕೊಂಬೆಗಳ ಸದ್ದು ಮಾತ್ರ.

ಕುಳಿತು ಸಾಕಾಯಿತು ಸಾವಿತ್ರಿಗೆ. ಇನ್ನೂ ಅವರು ಬಂದಿಲ್ಲ. ಯೋಚನೆಗಳ ಕಾಗದದ ಉಂಗುರಗಳು ಗಾಳಿಗೆ ಉರುಳುವಂತೆ ತೇಲಿ ಹೋಗುತಿತ್ತು. ಪಾಪ...ಅವರೆಷ್ಟು ಬಳಲಿ ಬರುತ್ತಾರೋ....

"ಬೆಳಗ್ಗೆಯಿಂದ ರಾತ್ರಿಯವರೆಗೆ ಗಾಣದಂತೆ ದುಡಿಯುತ್ತಾರೆ!"

"ಅಷ್ಟು ಕಷ್ಟಪಟ್ಟರೂ ಏನು ಸುಖ!"

ರೊಯ್ಯನೆ ಗಾಳಿ ಬೀಸಿತು. ಉಟ್ಟುಕೊಂಡಿದ್ದ ಸೀರೆಯ ಸೆರಗು ಗಾಳಿಗೆ ಜಾರಿಬಿತ್ತು. ಜಕ್ಕನೆ ಸರಿಪಡಿಸಿಕೊಂಡಳು. ಆಕಳಿಕೆ ಮಿತಿ ಮೀರಿತು. ಅವಳ ಕೈ ಮಲಗಿದ್ದ ಪುಟ್ಟ ಮಗುವಿನ ಕೋಮಲ ದೇಹ ತಟ್ಟುತಿತ್ತು. ಕಣ್ಣಿಗೆ ಕಾಣದ ಪ್ರಪಂಚದಲ್ಲಿ ತೇಲಿಹೋಗಿ ಸುಖವನ್ನನು ಭವಿಸುತ್ತಾ ಮಿಂಚುನಗೆ ಬೀರುತಿತ್ತು ಆ ಮಗುವಿನ ಮುಖ.

ಮೆಲ್ಲಗೆ ಸಾವಿತ್ರಿ ಎದ್ದು ನಿಂತಳು. ಕುಂದಿ ಹೋಗುತ್ತಿದ್ದ ದೀಪವನ್ನು ಸರಿಪಡಿಸಿಕೊಂಡಳು. ಮುಂಚೆಗಿಂತ ಹೆಚ್ಚಾಗಿ ಪ್ರಕಾಶ ಬೀರಲಾರಂಭಿಸಿತು.

ಹೊರಗೆ ಬಾಗಿಲು ತಟ್ಟುವ ಶಬ್ದ. ಸಾವಿತ್ರಿಯ ಕಿವಿ ನಿಮಿರಿತು. ಬಹುಶಃ ಗಾಳಿ ಇರಬಹುದೇ ? ಮತ್ತೊಮ್ಮೆ ತಟ್ಟಿದ ಶಬ್ದ. ಮೆಲ್ಲಗೆ ಕೂಗಿದ ಶಬ್ದ. "ಸಾವಿತ್ರಿ !......ಸಾವಿತ್ರಿ !!"

"ಬಂದೇ"....ಸಾವಿತ್ರಿಯು ಜಾಗ್ರತೆ ಹೋಗಿ ಬಾಗಿಲಿನ ಅಗುಣಿ ತೆಗೆದಳು. ಪಕ್ಕನೆ ಸೂರ್ಯ ಕಿರಣಗಳನ್ನು ಕಂಡು ಬಾಯ್ಬಿಡುವ ಕಮಲ ಪುಷ್ಪದಂತೆ ಸಾವಿತ್ರಿಯ ಮುಖವು ಅರಳಿತು.

ಒಳಗೆ ಬಂದ ಶ್ರೀನಿವಾಸಯ್ಯ. ಉಟ್ಟಿದ್ದ ಬಟ್ಟೆಗಳ ಸಮೇತ ಸ್ನಾನ ಮಾಡಿ ಬಂದವನಂತೆ ಕಂಡನು. ಮತ್ತೆ ಬಾಗಿಲ ಅಗುಳಿ ಹಾಕಿದಳು ಸಾವಿತ್ರಿ. ಬಂದವಳೆ ಒಳಗೆ ಹೋಗಿ ಮಡಿಯಾದ ಬಟ್ಟೆಗಳನ್ನು ತೆಗೆದುಕೊಂಡು ಬಂದಳು. ಶ್ರೀನಿವಾಸಯ್ಯ ಒಳಗೆ ಹೋಗಿ ಬಟ್ಟೆ ಬದಲಾಯಿಸಿ ಬಂದನು. ಅಷ್ಟರಲ್ಲಿ ಸಾವಿತ್ರಿ ಅಡುಗೆ ಮನೆಯಲ್ಲಿ ಊಟಕ್ಕೆ ಸಿದ್ಧ ಮಾಡಿದ್ದಳು.

ಕೈಕಾಲು ತೊಳೆದವನೇ ಅಡುಗೆ ಮನೆಗೆ ಧಾವಿಸಿ ಬಂದ. ಹಾಕಿದ್ದ ಎರಡು ತಟ್ಟೆಗಳನ್ನು ದಿಟ್ಟಿಸಿದ. ದಿನಚರಿ ಅದು ಇನ್ನೊಂದು ತಟ್ಟೆಯ ಕಡೆಗೆ ಕೈ ತೋರಿಸಿ,

"ಆ ತಟ್ಟೆ ಯಾರಿಗೆ ?"

"ನನಗೆ" ಮೆಲ್ಲಗೆ ಸಾವಿತ್ರಿ ಹೇಳಿದಳು.

"ನಾನು ಎಷ್ಟು ಸಾರಿ ಹೇಳೋದು ಸಾತೂ, ನನಗೋಸ್ಕರ ಕಾಯ ಬೇಡ. ಮಕ್ಕಳ ಜೊತೆಯಲ್ಲಿ ಊಟ ಮುಗಿಸಿಬಿಟ್ಟು ಸಿಧ್ರೆ ಮಾಡು ಅಂತ."

ಸಾವಿತ್ರಿ ಮೌನದಿಂದಲೇ ಬಡಸಲು ತೊಡಗಿದಳು.

"ಹೋಗಲಿ, ಇನ್ನು ಮೇಲಾದರೂ ಮಾಡಿಬಡು."

—ಹೇಳಿದವನೇ ಕೈ ಹಾಕಿದ ತಟ್ಟೆಗೆ.

ಹೊಟ್ಟೆಯಲ್ಲಿ ಹಸಿವು ಬಹಳವಾಗಿತ್ತು. ಅಂತೂ ಊಟ ಮುಗಿಸಿದ.

ಹೋದವನೇ ಅರಳಿಸಿದ್ದ ಹಾಸಿಗೆಯ ಮೇಲೆ ಪವಡಿಸಿದನು. ಅಂಗಾತನಾಗಿ ಮಲಗಿ ಚಾವಣಿಯನ್ನೇ ದಿಟ್ಟಿಸಿ ನೋಡುತ್ತಾ ಮಲಗಿದನು. ಕೈ ತೊಳೆದವಳೇ ಸಾವಿತ್ರಿ ಒಳಗೆ ಬಂದಳು. ಶ್ರೀನಿವಾಸಯ್ಯ ಅವಳೆಡೆಗೆ

ತಿರುಗಿದ. ಅವಳೂ ಅದೇತಾನೆ ನೋಡಿದಳು. ನಗು ತುಂಬಿದ ಮುಖ ಗಳೆರಡರಲ್ಲೂ ಮಂದಹಾಸದ ಬೆಳಕು ಬೀರಿದುವು.

ಬಂದವಳೇ ಶ್ರೀನಿವಾಸಯ್ಯನ ಕಾಲುಗಳನ್ನು ಒಸುಕಲಾರಂಭಿಸಿದಳು. ಇದುವರೆಗೆ ಬಂದಿದ್ದ ನಿದ್ರಾದೇವಿ, ಪತಿಯನ್ನು ನೋಡಿದ ಕೂಡಲೆ ಓಡಿ ಹೋದಳು. ಹಗಲೆಲ್ಲಾ ಓಡಾಡಿ ಸುಸ್ತಾಗಿದ್ದ ಕಾಲುಗಳು ಸ್ವಲ್ಪ ಜೀವ ವನ್ನು ತುಂಬಿಕೊಳ್ಳಲಾರಂಭಿಸಿದುವು. ಬಳಲಿಹೋಗಿ ಬೆಂಡಾಗಿದ್ದ ಅವನ ದೇಹವು ನಿದ್ರೆಯಿಂದ ನಿರ್ಜೀವಿತವಾಯಿತು.

ಸಾವಿತ್ರಿಯು ಎದ್ದಳು. ಹೊದ್ದಿಗೆ ಹೊದ್ದಿಸಿ ಮಲಗಿದ್ದ ಮಕ್ಕಳೆಡೆ ನೋಡಿದಳು. ಒಂದು ಗಂಡು – ಒಂದು ಹೆಣ್ಣು. ನಿದ್ರೆಯ ಅಂತರದಲ್ಲಿ ಮುಳುಗಿ ಹೋಗಿದ್ದುವು.

ಉರಿಯುತ್ತಿದ್ದ ದೀಪವನ್ನಾರಿಸಿ ತಾನೊಂದು ಕಡೆ ಮಲಗಿದಳು. ಯೋಚನಾತರಂಗಗಳು ನಿದ್ರೆಯನ್ನು ಓಡಿಸಿತ್ತು. ಕಡೆಗೆ ಯಾವಾಗ ನಿದ್ರೆ ಬಂತೋ....

* * * *

ದೂರದ ಒಕ್ಕಲಿಗರ ಮನೆಯಿಂದ ಕೋಳಿ ಮತ್ತು ಹುಂಜಗಳ ಕೂಗು ಕೇಳಿಬಂತು,

ಕು ! ಕೂ !! ಕೂ !!!

ದೂರದಲ್ಲಿದ್ದ ಬಿನ್ನೀಮಿಲ್ಲಿನ ಘಂಟೆಯ ಶಬ್ದ ಕೇಳಿತು.

ಸೂರ್ಯನು ಮುನ್ನುಗ್ಗುತ್ತಾ ತನ್ನ ಕೆಂಪು ಕಿರಣಗಳನ್ನು ಮನೆಯ ಒಳ ಗೆಲ್ಲಾ ವ್ಯಾಪಿಸುವಂತೆ ಮೂಡಿದ್ದನು. ಮೆಲ್ಲಗೆ ಗಾಳಿಯು ಬೀಸಿತು.

ಫಕ್ಕನೆ ಸಾವಿತ್ರಿಗೆ ಎಚ್ಚರವಾಯ್ತು. ಕಣ್ಣುಗಳು ಸೆಳೆಯುವಂತೆ ಬಿಸಿಲು ಬಂದಿತ್ತು ಕೂಡಲೆ ಎದ್ದಳು. ಮುಖ ತೊಳೆದು ಕಾಫಿಗೆ ನೀರಿಟ್ಟಳು. ಅಡುಗೆ ಮನೆಯಲ್ಲಾದ ಪಾತ್ರೆಯ ಸದ್ದು ಕೇಳಿ ಎಲ್ಲರೂ ಎದ್ದರು. ಆಗಲೇ ಏಳು ಘಂಟೆಯಾಗಿ ಹೋಗಿತ್ತು.

ದಿನ ಬೆಳಗಾದರೆ ಆಗಬೇಕಾಗಿದ್ದ ದಿನಚರಿ.

೨

ಆಗಲೆ ನಾಲ್ಕು ವರ್ಷಗಳು ಕಳೆದು ಹೋಗಿದ್ದುವು. ಆಗ ಸಾವಿತ್ರಿಗೆ ಹದಿನಾಲ್ಕು ವರ್ಷ. ತಂದೆ ರಾಮಸ್ವಾಮಿ, ಸೆಂಟ್ರಲ್ ಬ್ಯಾಂಕಿನ ಕ್ಯಾಷಿಯರ್. ತಾಯಿ ವೇದಾವತಮ್ಮ. ತಂದೆ ತಾಯಿಗಳ ಮುದ್ದು ಕುವರಿಯಾಗಿ ಬೆಳೆದಳು. ಮಗಳಲ್ಲಿ ಬಹಳ ಅಕ್ಕರೆ. ಮೆಟ್ರಿಕ್ ಪಾಸಾಗಿ ಕಾಲೇಜು ಕೂಡ ಓದಲಾರಂಭಿಸಿದಳು ಹುಡುಗಿ ಬುದ್ಧಿವಂತೆ ಮಗಳಿಗೆ ಮದುವೆ ಮಾಡುವ ದಿನವಾದರೂ ಯಾವುದೋ ಒಂದು ಕಾರಣ ಅವರನ್ನು ಅಷ್ಟು ಕಾಕಿತ್ತು. ಒಬ್ಬಳೇ ಮಗಳು. ಬೇರೆ ಸಂತಾನವಿಲ್ಲದ ಸಂಸಾರ. ಮದುವೆಯಾಗಿ ಮನೆಬಿಟ್ಟು ಹೋಗುವಳಲ್ಲಾ ಎಂಬ ಸಂಕಟ.

ಈ ಮಧ್ಯೆ ಸುಬ್ರಮಣ್ಯಂ, ಅವರಿಗೆ ಗುರುತಾದರು. ಒಂದೇ ಕುಲ-ಒಂದೇ ಜಾತಿ - ಒಂದೇ ಮನಸ್ಸು. ಸುಬ್ರಮಣ್ಯಂ ಸ್ವಲ್ಪ ಮುದುಕರು. ಮೂರು ಜನ ಗಂಡುಮಕ್ಕಳು. ಕಡೆಯವನೇ ಶ್ರೀನಿವಾಸಯ್ಯ. ಇಬ್ಬರು ಮೊದಲು ಮಕ್ಕಳಿಗೆ ಮದುವೆಯಾಗಿ ಆಗಲೆ ಮೂರು ವರ್ಷ ಕಳೆದಿತ್ತು. ಜೊತೆಗೆ 'ಪೆನ್‌ಶನ್ನು' ಬರುತ್ತಿತ್ತು. ಮಕ್ಕಳಿಗೆ ಎಲ್ಲಾ ಒಳ್ಳೇ ಕೆಲಸ. ಎಲ್ಲರೂ ವಿದ್ಯಾವಂತರು ಕೂಡ. ಶ್ರೀನಿವಾಸಯ್ಯ ಏರ್‌ಕ್ರಾಫ್ಟ್‌ನಲ್ಲಿ ಕೆಲಸದಲ್ಲಿದ್ದ. ನೋಡಲು ಅಂದಚೆಂದವಾಗಿದ್ದ. ತಮ್ಮ ಸಾವಿತ್ರಿಯನ್ನು ಏಕೆ ಕೊಡಬಾರದು ಅಂದುಕೊಂಡರು ರಾಮಸ್ವಾಮಿ. ಸರಿ ಇನ್ನೇನು ಗೆಳೆತನ. ಒಪ್ಪಿಗೆಯಾಗಿಯೇ ಹೋಯಿತು. ಇದ್ದವಳು ಒಬ್ಬಳೇ ಮಗಳಾದುದರಿಂದ ಸ್ವಲ್ಪ ಜೋರಾಗಿಯೇ ಮದುವೆ ಆಯಿತು. ಸತಿ-ಪತಿಗಳ ಈಡು-ಜೋಡು ಎಲ್ಲಾ ಅಂದ-ಚೆಂದವಾಗಿಯೇ ಇತ್ತು. ಹೊಸದಾಗಿ ಮದುವೆಯಾದವರು. ಆಗಲೆ ನಾಲ್ಕು ವರ್ಷ ನಾಲ್ಕು ನಿಮಿಷದಂತೆ ಕಳೆದುಹೋಯಿತು. ಎರಡು ಮಕ್ಕಳು ಬೇರೆ ಆಯಿತು. ಒಂದು ಗಂಡು-ಒಂದು ಹೆಣ್ಣು. ಶಂಕರ-ಶಾರದ ಅಂತ ಹೆಸರೂ ಆಯಿತು.

೩

ಅಂದು ಭಾನುವಾರ. ಹೊರಗೆ ಹೋದ ಶ್ರೀನಿವಾಸಯ್ಯ ಇನ್ನೂ ಮನೆಗೆ ಹಿಂದಿರುಗಿರಲಿಲ್ಲ. ಹನ್ನೊಂದು ಘಂಟೆಯೊಳಗಿನ ಹೊತ್ತು. ಶಂಕರ-ಶಾರದ ಆಟವಾಡುತ್ತಿದ್ದರು. ಸಾವಿತ್ರಿ ಅಡುಗೆ ಮಾಡುತ್ತಿದ್ದಳು.

ಹೊರಗೆ ಬಾಗಿಲು ತಟ್ಟಿದ ಶಬ್ದವಾಯಿತು. ಜೊತೆಗೆ 'ಅಮ್ಮಾ'.... 'ಅಮ್ಮಾ!' ಎಂಬ ಕೂಗಿದ ದನಿ. ಯಾರಿರಬಹುದು? ಸಾವಿತ್ರಿಗೆ ಕುತೂಹಲವಾಯಿತು. ಬಹುಶಃ ಭಿಕ್ಷೆ ಕೇಳುವುದಕ್ಕಾಗಿ ಬಂದವರಿರಬಹುದು.

ಮತ್ತೆ 'ಅಮ್ಮಾ!' ಎಂದು ಕೂಗು.

ಶಬ್ದ ಹೆಂಗಸಿನ ಕಂಠದಿಂದ ಬರುತ್ತಿತ್ತು. ದುಃಖ-ಬೇಗೆ-ಕರುಣೆ ತುಂಬಿತ್ತು ಆ ಸ್ವರದಲ್ಲಿ. ಸಾವಿತ್ರಿ ಹೋಗಿ ಬಾಗಿಲು ತೆರೆದಳು.

ಬಂದವಳು ಹೆಂಗಸು. ಇನ್ನೂ ತರುಣಿ. ಸುಮಾರು ಇಪ್ಪತ್ತು ವರ್ಷ ವಯಸ್ಸು ಅಷ್ಟೆ. ಮುಖ ಕಂದಿಹೋಗಿತ್ತು. ಉಟ್ಟಿದ್ದ ಸೀರೆ ಚಿಂದಿ ಚಿಂದಿಯಾಗಿತ್ತು. ಒಳಗಿನ ಸೌಂದರ್ಯ ಹೊರಗೆ ನುಗ್ಗಲು ತೊಡಗಿ ಆ ಚಿಂದಿ ಹರಿವೆಯ ರಂಧ್ರದ ಮೂಲಕ ಹೊರಗೆ ಇಣುಕುತಿತ್ತು. ಹಣೆಯಲ್ಲಿ ರಾರಾಜಿಸುವ ಕುಂಕುಮ. ತಲೆಯ ಕೂದಲು ಗಾಳಿಗೆ ಕೆದರಿ ಮುಖದ ಮೇಲೆ ಹರಿದಾಡುತಿತ್ತು. ಪಕ್ಕದಲ್ಲೇ ಒಬ್ಬ ಪುಟ್ಟ ಹುಡುಗ. ಸುಮಾರು ಹತ್ತು ವರ್ಷವಿರಬಹುದು.

ಎವೆಯಿಕ್ಕದೆ ಸಾವಿತ್ರಿ ನೋಡಿದಳು. ಗಂಟಲಲ್ಲೇ ಮಾತು ನುಂಗಿ ಹೋಗಿತ್ತು. ಆ ಅಪರಿಚಿತ ಯುವತಿಯು ತನಗೆ ಯಾವತ್ ಪರಿಚಿತಳಂತೆ ಕಂಡುಬಂದಳು. ಹಾಗೂ ಕಡೆಗೆ ಸಾವಿತ್ರಿ ಬಾಯಿ ತೆಗೆದಳು,

"ಯಾರಮ್ಮಾ ನೀನು?"

ಅಪರಿಚಿತೆಯು ಕಣ್ಣಿನ ಕಟ್ಟೆ ಒಡೆಯಿತು. ನೀರು ಧಾರಾಕಾರವಾಗಿ ಸುರಿಯಿತು-ದೇವಲೋಕದಿಂದ ಇಳಿದು ಬಂದ ಗಂಗೆಯಂತೆ-ಮೌನವೇ ಉತ್ತರ.

ಸಾವಿತ್ರಿ ಮತ್ತೆ ಕೇಳಿದಳು.

"ಏನಮ್ಮಾ ಬೇಕು ?"

ಅಪರಿಚಿತೆ ಕೂಡಲೆ ಸಾವಿತ್ರಿಯ ಕಾಲಿಗೆ ಬಿದ್ದಳು.

ಕೂಡಲೇ ಸಾವಿತ್ರಿ ಅವಳನ್ನು ಎಬ್ಬಿಸಿ ಒಳಗೆ ಕರೆದೊಯ್ದಳು. ಚಾಪೆ ಹಾಸಿ ಕೂರಿಸಿದಳು. ಮಾಡಿಟ್ಟಿದ್ದ ಒಂದು ಹಾಲಿನ ಲೋಟ ತಂದಿಟ್ಟಳು.

ಬಂದವಳು ಮಗುವಿಗರ್ಧ ಕುಡಿಸಿ ತಾನರ್ಧ ಕುಡಿದಳು.

ಶಕ್ತಿ ಉಮ್ಮಳಿಸಿ ಬಂದಹಾಗಾಯಿತು. ನರನಾಡಿಗಳಲ್ಲಿ ರಕ್ತ ತೀವ್ರವಾಗಿ ಹರಿಯಲಾರಂಭಿಸಿತು. ಸಾವಿತ್ರಿ ಕೇಳಿದಳು,

"ಈಗ ಹೇಳಮ್ಮಾ ನನ್ನ ಪ್ರಶ್ನೆಗೆ ಉತ್ತರ ?" ಶಂಕರ-ಶಾರದ ಇಬ್ಬರು ಬಂದು ನಿಂತುಕೊಂಡರು, ತಮ್ಮ ವಯಸ್ಸಿನ ಹುಡುಗನೊಬ್ಬ ಬಂದಿರುವುದನ್ನು ನೋಡಿ ಕಣ್ಣು ಮಿಟುಕಿಸದೆ ನೋಡುತ್ತಾ ನಿಂತುಕೊಂಡರು.

ಸಾವಿತ್ರಿ ಆ ಹುಡುಗರಿಗೆ ಹೊರಗೆ ಹೋಗಿ ಆಟವಾಡಿಕೊಳ್ಳಲು ಹೇಳಿದಳು. ಕೂಡಲೆ ಮೂವರೂ ಕುಪ್ಪಳಿಸುತ್ತಾ ಹೊರಗೆ ಆಡಲು ಹೋದರು.

ಮತ್ತೆ ಮೌನ.

ಮೌನ ಮುರಿದು ಮಾತನಾಡಲಾರಂಭಿಸಿದಳು ಆ ಬಂದ ಅಪರಿಚಿತೆ.

"ನನ್ನ ಹೆಸರು ರಾಧ. ನಮ್ಮ ಊರು ದಾವಣಗೆರೆ. ಅಲ್ಲೇ ನಮ್ಮ ತಂದೆ ತಾಯಿಗಳೂ ಇದ್ದರು. ಹದಿನಾರು ವರ್ಷ ಆದ ಕೂಡಲೆ ನನಗೆ ನಮ್ಮ ತಂದೆ ಮದುವೆ ಮಾಡಿದರು. ಅವರ ಊರು ಗೇರುಸೊಪ್ಪೆ ಬಳಿ. ಅವರ ಮನೆಯಲ್ಲಿ ಅವರ ತಂದೆ ಮತ್ತು ಅಕ್ಕ ಮಾತ್ರ. ಅವರಿಬ್ಬರೂ ಒಳ್ಳೆಯವರೇ. ಅವರು....ಅದೇ ನನ್ನ....ಅವರೂ ಆಗ ಒಳ್ಳೆಯವರೇ ಆಗಿದ್ದರು. ಮದುವೆಯಾಗಿ ಆ ಊರಿಗೆ ಬಂದೆ. ಬಂದ ಹೊಸದರಲ್ಲಿ ನನ್ನ ದೇವತೆಯಂತೆ ನೋಡಿಕೊಂಡರು. ಹೀಗೆ ಒಂದು ವರ್ಷ....ಎರಡು....ಮೂರು ವರ್ಷ ಕಳೆದು ಹೋಯಿತು. ನನಗೆ ಮಕ್ಕಳೇ ಆಗಲಿಲ್ಲ. ಇದೇ ನಮ್ಮ ವಿರಸಕ್ಕೆ ಕಾರಣವಾಯಿತು. ಬೀದಿಯಲ್ಲಿ ಓಡಾಡುತ್ತಿದ್ದ ಮಕ್ಕಳನ್ನೆಲ್ಲಾ ನೋಡಿ-ನೋಡಿ ಅವರು ಉತ್ಸಾಹ ಪಡುತ್ತಿದ್ದರು. ನನ್ನ ಮೌನ ನೋಡಿದ ಕೂಡಲೆ, ಅವರ ಮುಖ ಖಿನ್ನವಾಗುತಿತ್ತು. ಈ ಜನ್ಮದಲ್ಲಿ ಮಕ್ಕಳಾಗುತ್ತವೆಯೋ ಇಲ್ಲವೋ

ಎಂಬುದೇ ಅವರ ಕೊರಗು. ಯಾರೋ ವೈದ್ಯರು ಗುರುತಿಪ್ಪರಂತೆ ಅವರಿಗೆ. ನನ್ನನ್ನು ಪರಿಕ್ಷೆ ಮಾಡಿಸಿದರು. ಅಂತೂ ಆಮೇಲೆ ಏನಂದರೋ, ಗೊತ್ತಿಲ್ಲ. ಅಂದಿನಿಂದಲೇ ನನ್ನ ಕಂಡರೆ ಕೋಪ ತಿರಸ್ಕಾರ ಉಂಟಾಯಿತು. ಪೂರ್ತಿ ಕಡೆಗಾಣಿಸಿದರು ನನ್ನನ್ನು ಮಾತನಾಡಿಸೋದಿರಲಿ, ನನ್ನ ಕಡೆ ಕಣ್ಣು ಕೂಡ ತಿರುಗಿಸಿ ನೋಡುತ್ತಿರಲಿಲ್ಲ. ಮನೆಗೆ ಬಂಪ್ರೆ ಒರ ತ್ತಿದ್ದರು ಇಲ್ಲದಿದ್ದರೆ ಇಲ್ಲವೇ ಇಲ್ಲ. ಏನುಮಾಡುತ್ತಿದ್ದರೋ ಏನೋ ಆ ದೇವರಿಗೇ ಗೊತ್ತು. ತಾಳಿ ತಾಳಿ ನನಗೆ ಬೇಸರವಾಗಿ ಹೋಯಿತು. ಸಾಕಾಗೋತನಕ ಸುಮ್ಮ ನಿದ್ದೆ. ಕಡೆಗೆ ಅಲ್ಲಿಂದ ತೌರುಮನೆಗೆ ಹೋದೆ. ನಾನು ಹೋದ ವಿಷ ಗಳಿಗೆಯೋ ಏನೋ ನಮ್ಮ ಮನೆಗೆ ಬೆಂಕಿ ಬಿತ್ತು. ನಮ್ಮ ತಂದೆ, ತಾಯಿ ಮತ್ತು ತಂಗಿ ಎಲ್ಲರೂ ಸಿಕ್ಕಿಹೋದರು. ಬದುಕುವ ಆಸೆಯೇ ಹೊರಟು ಹೋಗಿತ್ತು. ಅದರಲ್ಲೇ ಬಸ್ಮವಾಗಿ ಹೋದರು. ಉಳಿದವರು ಅಂದರೆ ನಾನು ಮತ್ತು ನನ್ನ ತಮ್ಮ. ಇವನೇ ಈಗ ನನ್ನ ಜೊತೆ ಬಂದಿದ್ದಾನಲ್ಲ.... ಅವನೇ. ಅಲ್ಲಿ ಯಾರೂ ನನಗೆ ಆಶ್ರಯ ಕೊಡಲಿಲ್ಲ. ನಾನೋ ಒಂಟಿ ಹೆಂಗಸು. ಹೇಗೆ ತಾನೆ ಮುನ್ನುಗ್ಗಲಿ. ಅಲ್ಲಿಂದ ನಾನು ಈ ಊರಿಗೆ ಬಂದೆ. ಎಲ್ಲರ ಮನೆಯಲ್ಲಿ ಕೂಡ ಆಶ್ರಯ ನನಗೆ ಸಿಗಲಿಲ್ಲ. ನನ್ನ ಹಿಂದಿನ ಜನ್ಮದ ಪಾಪ ಮಾಡಿದ್ದರಿಂದಲೇ ಈಗ ಹೀಗೆ ಅನುಭವಿಸುತ್ತಿರುವುದು."

ದುಃಖ ಉಮ್ಮಳಿಸಿ ಬಂತು. ನೀರು ತಟಕ್ಕನೆ ಸಿಲ್ಲಲಾರಂಭಿಸಿತು. ಅಂತೂ ಮುಂದುವರಿಸಿದಳು.

ಅಕ್ಕಾ....ನಿಮ್ಮ ತಂಗಿ ಅಂತ ತಿಳಿದುಕೊಂಡು ಆಶ್ರಯ ಕೊಡಿ. ಮುಸುರೆ ತಿಕ್ಕೊಂಡು ಇರುತ್ತೀನಿ. ನನ್ನಿಂದ ನಿಮಗೆ ಯಾವ ಹಾನಿಯೂ ಉಂಟಾಗಲ್ಲ. ನನ್ನ ತಮ್ಮ ಅಂಗಡಿಯಿಂದ ಸಾಮಾನು ತಂದುಕೊಡುತ್ತಾನೆ. ಅಂತೂ ಕೊಂಚ ಕೂಡ ಬೇಸರ ತರದೆಯೇ ನಿಮ್ಮ ಸೇವೆ ಮಾಡುತ್ತೀವಿ. ನನಗೆ ದಯವಿಟ್ಟು ಆಶ್ರಯ ಕೊಡೀ....ಅಕ್ಕಾ...."

"ಅಕ್ಕಾ !....ಅಕ್ಕಾ !!....ಅಕ್ಕಾ !!!"

ಸಾವಿತ್ರಿಯ ಕಿವಿಗಳಲ್ಲಿ ಆ ಧ್ವನಿ ಪ್ರತಿಬಿಂಭಿಸತೊಡಗಿತು. ಕೇಳುತ್ತಾ ಕೇಳುತ್ತಾ ಕಣ್ಣಲ್ಲಿ ನೀರು ಸುರಿಯುತಿತ್ತು. ತನಗೆ ಆ ಗತಿ ಬಂದಿದ್ದರ ಎಷ್ಟು ಕಷ್ಟಪಡಬೇಕಾಕಿತ್ತು ! ಸಾವಿತ್ರಿ ನಡುಗಿದಳು.

ಅಂತೂ ದೇವರು ತನಗೆ ಆ ಗತಿ ತಂದೊಡ್ಡಲಿಲ್ಲ. ಹೋಗಲಿ ಅವಳಿಗೆ ಆಶ್ರಯ ಕೊಟ್ಟರೇನು ತಪ್ಪು. ನನಗೂ ಸಹಾಯವಾಗುತ್ತೆ. ಅದೂ ಅಲ್ಲದೆ ಒಳ್ಳೆಯವಳು–ಕಷ್ಟ ಅನುಭವಿಸಿದವಳು.

ಅಂತು ಅವರನ್ನು ಒಂದು ಮಾತು ಕೇಳಬೇಕಲ್ಲವೆ!

ಮತ್ತೆ ಮೌನ. ಬಂದ ಅಪರಿಚಿತೆ ಈಗ ಪರಿಚಿತೆಯಾಗಿದ್ದಳು. ಆದರೂ ಏನೊಂದೂ ಮಾತೂ ಸಾಗದೇ ಹೋಗುವಂತಿತ್ತು. ಅವಳು ಸಾವಿತ್ರಿ ಕಡೆಗೆ ನೆಟ್ಟ ನೋಟದಿಂದ ನೋಡುತ್ತಿದ್ದಳು. ಆ ದೃಷ್ಟಿಯಲ್ಲಿ ಶಂಕೆ - ಕರುಣೆ ತುಂಬಿತ್ತು. ಸಾವಿತ್ರಿಯ ತಲೆಯಲ್ಲಿ ಮಿಂಚಿನಂತೆ ಯೋಚನೆ ಸಾಗಿತ್ತು. ಒಪ್ಪುವಳೋ ಅಥವಾ ಇಲ್ಲವೆನ್ನುವಳೋ ಎಂಬ ಸಂದೇಹ ಆ ರಾಧೆಗೆ.

ಹೊರಗೆ ಕಾಲಿನ ಸಪ್ಪಳ ಕೇಳಬಂತು. ತಟಕ್ಕನೆ ಬಂದ ಅಪರಿಚಿತೆ ಎದ್ದು ನಿಂತಳು. ಅದನ್ನು ನೋಡಿ ಸಾವಿತ್ರಿಯೂ ಎದ್ದು ನಿಂತಳು.

ಶ್ರೀನಿವಾಸಯ್ಯ ಒಳಗೆ ಬಂದ. ಸುತ್ತಲಿನ ವಾತಾವರಣ ಅವನನ್ನು ಮಾತನಾಡದೆ ಒಳಕ್ಕೆ ತಳ್ಳಿತು. ಮನೆ ಒಳಗೆ ಇರುವವರು ಯಾರೋ ಒಬ್ಬ ಹೆಣ್ಣು ಮಗಳೆಂದು ತಿಳಿದು ತಲೆ ತಗ್ಗಿಸಿ ರೂಮಿನೊಳಗೆ ನಡೆದನು.

ಅವನ ಹಿಂದೆಯೇ ಸಾವಿತ್ರಿ ಬಂದಳು. ಸಾವಿತ್ರಿಯ ಕಣ್ಣುಗಳನ್ನು ನೋಡಿದ. ಅತ್ತಮುಖ. ಅವಳು ಏತಕ್ಕೆ ಅತ್ತಳು? ಏನು ವಿಶೇಷ? ಮನಸ್ಸಿನಲ್ಲೇ ಯೋಚಿಸಲಾರಂಭಿಸಿದ. ಕೂಡಲೆ ಸಾವಿತ್ರಿ ಅವನೊಡನೆ ಮಾತು ಪ್ರಾರಂಭಿಸಿದಳು.

"ನೋಡೀಂಪ್ರೆ! ಈಗ ಬಂದಿದ್ದಾಳಲ್ಲ....."

"ಹೌದು......ಯಾರು?"

"ಯಾರೋ ದಾವಣಗೆರೆಯುವರಂತೆ.....ಪಾಪ ಗಂಡನ ಮನೆಯಿಂದ ತಪ್ಪಿಸಿಕೊಂಡು....ತೌರುಮನೆಗೆ ಬಂದಳಂತೆ....."

"ಅಯ್ಯೋ ಬಿಡೆ! ಈಗಿನ ಕಾಲದಲ್ಲಿ.....ನಿನಗೆ ಗೊತ್ತಿಲ್ಲ.....ಎಲ್ಲರೂ ಹಾಗೆ. ಅದು ಇದು ಹೇಳಿ ಹೊಟ್ಟೆ ಪಾಡಿಗೋಸ್ಕರ ಬರುತ್ತಾರೆ."

"ಹಾಗಲ್ಲ ಕಣ್ರೀ....ನಾನು ಬೇಕಾದರೂ ಪ್ರಮಾಣ ಮಾಡ್ತೀನಿ..... ಅಷ್ಟು ಗೊತ್ತಾಗುವುದಿಲ್ಲವೆ?"

"ಹಾಗಾದರೆ ಈವಾಗ ಏನು ಮಾಡಬೇಕೊಂತೀಯಾ?"

"ನೀವು ಏನೂ ಮಾಡಬೇಡಿ. ಪಾಪ ಅವಳೂ ಹೆಣ್ಣು ಹೆಂಗಸು ಒಬ್ಬಂಟಿಗಳು. ನಮ್ಮ ಮನೆಯಲ್ಲೂ ಬೇಕಾದಷ್ಟು ಕೆಲಸ-ಕಾರ್ಯಗಳು ಇದ್ದೇ ಇರುತ್ತವೆ. ನನಗೂ ಸಹಾಯವಾಗುತ್ತೆ."

"ಹಾಗಿದ್ದಲ್ಲಿ ಸರಿ—ನಿನ್ನಿಷ್ಟ."

"ನೋಡಿ, ನಾವಿರೋದು ನಾಲ್ಕು ಜನ. ಸಂಸಾರ ಬೆಳೆಯುತ್ತಾ ಹೋಗುತ್ತಾ ಇರುತ್ತೆ. ನಮ್ಮ ಜೊತೆಗೆ ಆ ಇಬ್ಬರು ನಮಗೆ ಏನೂ ಹೆಚ್ಚಲ್ಲ."

"ಸರಿಕಣೇ, ನಿನ್ನಿಷ್ಟ ಅಂದೆನೆಲ್ಲಾ. ಏನು ಬೇಕಾದರೂ ಮಾಡಿಕೋ"

ಸಾವಿತ್ರಿಗೆ ತನ್ನ ಇಷ್ಟ ಫಲಿಸಿತಲ್ಲಾ ಎಂದು ಸಂತೋಷವಾಯಿತು. "ನನ್ನ ಸ್ವಾಮಿ ನಿಜವಾಗಿ ದೇವರೇ–ಚಿನ್ನದಂತವರು, ಇಂತಹ ಪತಿಯನ್ನು ಹೊಂದಲು ನಾನು ಎಷ್ಟು ಪುಣ್ಯ ಮಾಡಿದ್ದೆನೋ" ಎಂದುಕೊಂಡಳು ಮನಸ್ಸಿನಲ್ಲಿ,

ಅಂದಿನಿಂದ ರಾಧ ಮತ್ತು ಅವಳ ತಮ್ಮ ಶಶಿಧರ ಅಲ್ಲೇ ಬಿಡಾರ ಹೂಡಿದರು,

## ೪

ತಿಂಗಳುಗಳು ಒಂದಾದ ನಂತರ ಮತ್ತೊಂದಾಗಿ ಉರುಳಿ ಹೋಯಿತು. ರಾಧ ಈಗ ಮನೆಯಲ್ಲಿ ಹಳಬಳಾದಳು. ಸಾವಿತ್ರಿಗೆ ಬಿಡುವು–ವಿಶ್ರಾಂತಿ ದೊರೆಯಿತು. ಅವಳ ಕೆಲಸಗಳನ್ನು ನೋಡಿ ಅವರಿಬ್ಬರಿಗೂ ಸಂತೋಷ. ಮನೆಯ ಓರಣವು ಅವಳಿಂದ ಅಲಂಕರಿಸಿ ಶೋಭಿಸುತ್ತಿತ್ತು. ಆ ಮನೆಗೆ ಕಲಶಪ್ರಾಯವಾದ ಗೋಪುರದಂತಿತ್ತು. ಬೆಳಗ್ಗೆ ನಾಲಕ್ಕು ಘಂಟೆಗೆ ಹಾಸಿಗೆಯಿಂದ ರಾಧ ಎದ್ದುಬಿಡುತ್ತಿದ್ದಳು. ನೀರುಒಲೆ ಹಾಕಿ ನಂತರ ಸ್ನಾನ ಮಾಡಿ, ಕಾಫಿ ಕಾಯಿಸಿ, ಎಲ್ಲರನ್ನೂ ಎಬ್ಬಿಸುತ್ತಿದ್ದಳು. ಪ್ರತಿಯೊಂದು ಕೆಲಸವನ್ನೂ ಒಪ್ಪವಾಗಿ ಮಾಡುತ್ತಿದ್ದಳು. ಸಾವಿತ್ರಿಯು ಮದ್ಯೆ ಕೆಲಸ ಮಾಡಲು ಹೋದರೆ ರಾಧ ಬಿಡುತ್ತಿರಲೇ ಇಲ್ಲ.

"ಹೋಗಿ ಅಕ್ಕಾ, ಸುಮ್ಮನೆ ಕುಳಿತುಕೊಳ್ಳಿ. ನಾನು ಎಲ್ಲಾ ನೋಡಿಕೊಳ್ತೀನಿ" ಅನ್ನುತ್ತಾ ಇದ್ದಳು.

ಕೆಲಸ ಕಾರ್ಯಗಳ ಮಧ್ಯೆ ಸಾವಿತ್ರಿ-ರಾಧೆಯ ಸಂಭಾಷಣೆ ಸೂಜಿಗೆ ದಾರ ಪೋಣಿಸಿದಂತೆ ಘಂಟೆಗಟ್ಟಲೆ ನಡೆದುಹೋಗುತ್ತಿತ್ತು.

ತನ್ನ ತೌರೂರಿನ ಸಮಾಚಾರ, ಒಡವೆ-ವಸ್ತುಗಳು, ಸೀರೆ-ಕುಪ್ಪಸಗಳು ಎಷ್ಟೋ ಅವರ ಮಾತಿನ ಲಹರಿಯಲ್ಲಿ ಉರುಳಿ ಹೋಗುತ್ತಿತ್ತು. ಶ್ರೀನಿವಾಸಯ್ಯ ನೇನಾದರೂ ಬಂದರೆ ಮಾತು ಅಲ್ಲಿಗೇ ನಿಲ್ಲಿಸಲ್ಪಡುತ್ತಿತ್ತು. ಮೌನ ತಾನೇ ತಾನಾಗಿ ಕುಣಿಯುತಿತ್ತು.

ಶಶಿಧರನನ್ನು ಶಂಕರ-ಶಾರದೆಯರ ಜೊತೆಯಲ್ಲಿ ಶಾಲೆಗೆ ಕಳುಹಿಸಬೇಕೆಂದು ತೀರ್ಮಾನವಾಯಿತು. ಮೊದಲು ಈ ವಿಷಯವನ್ನು ಕುರಿತು ರಾಧ ಹೇಳಲಿಲ್ಲ. ಶಂಕರ, ಶಾರದೆ ಇಬ್ಬರೂ ಸ್ಕೂಲಿಗೆ ಹೋಗಿ ಬರುತ್ತಿದ್ದರು. ಈ ನಡುವೆ ಶಶಿಧರ ಅಂಗಡಿಯಿಂದ ಸಾಮಾನುಗಳನ್ನು ತಂದು ಕೊಡುವುದು, ಕೆಲಸಗಳಲ್ಲಿ ಅಕ್ಕನಿಗೆ ಸಹಾಯ ಮಾಡುವುದು, ಮನೆಯಲ್ಲಿ ಸಾಮಾನು ಗಳನ್ನು ಓರಣವಾಗಿಟ್ಟುಕೊಳ್ಳುವುದು, ಇವೇ ಮುಂತಾದ ಕೆಲಸಗಳನ್ನು ಮಾಡುತ್ತಿದ್ದನು.

ಅವನು ಮಾಡುತ್ತಿದ್ದ ಕಾರ್ಯಗಳನ್ನು ವೀಕ್ಷಿಸುತ್ತಾ ಇರುತ್ತಿದ್ದ ಸಾವಿತ್ರಿ, ಅವನ ನಡವಳಿಕೆಯನ್ನು ಕಂಡು ಸಂತೋಷಪಡುತ್ತಿದ್ದಳು. ಅವನ ಮುಗ್ಧ ಮತ್ತು ಮೌನಸ್ವಭಾವಕ್ಕೆ ಸಾವಿತ್ರಿಯ ಹೆಂಗರಳು ಇಬ್ಬನಿಯಂತೆ ಕರಗಿ ನೀರಾಗುತ್ತಿತ್ತು. ಅವನನ್ನೂ ತನ್ನ ಮಕ್ಕಳಲ್ಲೊಬ್ಬನೆಂದೇ ತಿಳಿದಿದ್ದಳು. ಅವನಿಗೂ ಓದು ಕಲಿಸಿ ವಿದ್ಯಾವಂತನಾಗಬೇಕೆಂದು ಯೋಚಿಸುತ್ತಿದ್ದಳು. ಕಡೆಗೊಂದುದಿನ ಗಂಡನನ್ನು ಕೇಳಿದಳು.

"ಬೆಳಿಗ್ಗೆಯಿಂದ ಸಂಜೆವರೆವಿಗೆ ಶಶಿಧರನಿಗೆ ಬೇಜಾರಾಗುವುದಿಲ್ಲವೇ, ಅವನನ್ನೂ ಶಂಕರನ ಜೊತೆ ಸ್ಕೂಲಿಗೇಕೆ ಕಳುಹಿಸಬಾರದು?"

ಶ್ರೀನಿವಾಸಯ್ಯ ವಿಚಾರ ಮಾಡಿ ಹೇಳಿದ್ದ,

"ನೀನು ಹೇಳುವುದೇನೋ ಸರಿಯೆ. ಆದರೆ ಅವನಿಗೆ ಸ್ಕೂಲಿನ ಫೀ ಎಲ್ಲಿ ತರುವುದು?"

"ಅವನೇನು ಹೊರಗಿನವನೇನು ಅಂದ್ರೆ? ನಮ್ಮ ಮಕ್ಕಳಲ್ಲಿ ಅವನೂ ಒಬ್ಬ. ಅವನೊಬ್ಬನಿಗೆ ಏನು ತಾನೆ ವಿಪರೀತ ಖರ್ಚಾಗುತ್ತೆ ಹೇಳಿ."

"ನಿನ್ನಿಷ್ಟ ಏನು ಹಾಗಾದರೆ?, ಎಲ್ಲವನ್ನೂ ನೋಡಿಕೊಳ್ಳುವವಳು ನೀನೇ ಅಲ್ಲವೆ!"

"ನನ್ನಿಷ್ಟ ಏನೂಂದರೆ ಶಂಭುವನ್ನು ಶಾಲೆಗೆ ಕಳುಹಿಸುವುದು ಒಳ್ಳೆಯದು."

"ನಿನ್ನಿಷ್ಟ. ಹಾಗಾದರೆ ಹಾಗೆ ಮಾಡು. ನಿನ್ನ ಮಾತಿಗೆ ನಾನು ಎದುರು ಹೇಳಲು ಸಾಧ್ಯವೆ?"

"ಖಂಡಿತ ಇಲ್ಲ."

ಶ್ರೀನಿವಾಸಯ್ಯ ನಕ್ಕು ನುಡಿದಿದ್ದ. ಸಾವಿತ್ರಿ ತನ್ನ ಆಶೆ ಕೈಗೂಡಿದ್ದಕ್ಕೆ ಸಂತಸಗೊಂಡು ತನ್ನ ಕೈಗಳೆರಡನ್ನೂ ಮಾಲೆಯಂತೆ ಅವನ ಕುತ್ತಿಗೆಗ ಬಿಗಿದು ಜಗ್ಗಿ ಹೇಳಿದಳು.

"ನಿಜ. ನನ್ನ ದೇವರು ಎಂದಿಗೂ ಈ ಭಕ್ತಳ ವಾಕ್ಯಕ್ಕೆ ಎದುರು ನುಡಿಯುವುದಿಲ್ಲ ಎಂಬುದು ನನಗೆ ಚೆನ್ನಾಗಿ ಗೊತ್ತಿದೆ."

ಶ್ರೀನಿವಾಸಯ್ಯ ಮುಗುಳ್ನಗೆ ಬೀರಿದನು.

## ೫

ಇದ್ದಕ್ಕಿದ್ದ ಹಾಗೆಯೇ ವೇದವತಮ್ಮನವರ ದೇಹ ತೆಳುವಾಯಿತು. ಈಗ್ಗೆ ಆರು ದಿನಗಳ ಹಿಂದೆ ಸ್ವಲ್ಪ ಜ್ವರ ಕಾಣಿಸಿಕೊಂಡುದೇ ಇದಕ್ಕೆ ಮೊದಲಾಯಿತು. ಪತಿಯ ಜೊತೆ ಹೊರಗೆ ಹೋಗಿದ್ದಾಗ ಮಳೆಯಲ್ಲಿ ನೆನೆಯುವ ಸಂದರ್ಭ ಬಂತು. ಮಳೆಯಲ್ಲಿ ಪೂರಾ ನೆನೆದರು. ಮಾರನೆಯ ದಿನದಿಂದಲೇ ನೆಗಡಿ–ಜ್ವರ ಕಾಣಲಾರಂಬಿಸಿತು. ಮೊದಮೊದಲು 'ಅದು ಏನು ಮಾಡೀತು' ಎಂದು ನಿರಾಕರಿಸಿಬಿಟ್ಟರು. ಅದೇ ಜ್ವರವೇ ಮರುಕಳಿಸಿ ದೊಡ್ಡದಾಯಿತು. ಸುಬ್ರಮಣ್ಯ ಮುಂತಾದವರೆಲ್ಲಾ ಬಂದರು. ಪತಿ ರಾಮಸ್ವಾಮಿಯವರೂ ಕೂಡ ಗಾಬರಿಗೊಂಡರು. ವೈದ್ಯರನ್ನು ಕರೆಸಿದರು. ಔಷಧಗಳ ಮೇಲೆ ಔಷಧಗಳಾಯಿತು, ಮಾತ್ರೆಗಳಾಯಿತು, 'ಇಂಜೆಕ್ಷನ್'

ಗಳಾಯಿತು. ಏನಾದರೂ ಹತ್ತಿದ್ದ ಜ್ವರ ಇಳಿಯಲಿಲ್ಲ. ದಿನದಿನಕ್ಕೆ ಉಷ್ಣಾಂಶ ಏರುತಿತ್ತು.

ರಾಮಸ್ವಾಮಿಗಳಿಗೆ ಗಾಬರಿ ಬಹಳವಾಯಿತು, ಸಹಾಯಕ್ಕೆ ಯಾರೂ ಹತ್ತಿರವಿರಲಿಲ್ಲ. ಮಗಳು ಮತ್ತು ಅಳಿಯನನ್ನು ಕರೆಸಲು ತೀರ್ಮಾನಿಸಿದರು. ಈ ಸಮಾಚಾರ ವೇದವತಮ್ಮನವರ ಕಿವಿಗೆ ಬಿತ್ತು. ಅವರಿಗೆ ಗಾಬರಿ ಯಾಯಿತು.

"ಯಾಕೇಂದ್ರೆ ಹಾರಾಡುತ್ತೀರಿ. ಏನೋ ಬಂದಿದೆ-ಹೋಗುತ್ತೆ. ಗಂಡನ ಮನೆಯಲ್ಲಿ ಸುಖವಾಗಿ ಹಾಯಾಗಿರೋ ಹುಡುಗೀಗೆ ಯಾಕೆ ಗಾಬರಿ ಮಾಡಿಸುತ್ತೀರಿ...."

"ಅಲ್ಲಾ ಕಣೇ, ಇಲ್ಲಿ ನನ್ನ-ನಿನ್ನ ಸಹಾಯಕ್ಕೆ ಯಾರೂ ಇಲ್ಲ. ಅದೂ ಅಲ್ಲದೆ ತೌರುಮನೆಗೆ ಬಂದು ಎಷ್ಟು ದಿನವಾಯಿತು."

"ಏನೊ ನಿಮ್ಮಿಷ್ಟ."

ಅಂತೂ ರಾಮಸ್ವಾಮಿಯವರ ಆಶಯವೇ ತೀರ್ಮಾನವಾಯಿತು. ಮಾರನೆಯ ದಿನವೇ ಕಾಗದ ಬರೆದರು. ತೌರುಮನೆಯಿಂದ ಬಂದ ಕಾಗದ ಸಾವಿತ್ರಿಯನ್ನು ಕುತೂಹಲಪಡಿಸಿತು.

ಚಿರಂಜೀವಿ ಶ್ರೀನಿವಾಸಯ್ಯನಿಗೆ,

ಈಗ್ಗೆ ಕೆಲವು ದಿನಗಳಿಂದಲೂ ನಿಮ್ಮ ಅತ್ತೆಯ ಮೈ ಚೆನ್ನಾಗಿಲ್ಲ. ಜ್ವರವೇ ಕಾರಣ. ದಿನವೂ ಔಷಧಿ ತೆಗೆದು ಕೊಳ್ಳುತ್ತಿದ್ದಾಳೆ. ಆದರೂ ದಿನ ದಿನಕ್ಕೆ ತೀವ್ರವಾಗುತ್ತಲಿದೆ. ಆದ್ದರಿಂದ ಆದಷ್ಟು ಬೇಗ ಸಾವಿತ್ರಿಯನ್ನು ಮತ್ತು ಮಕ್ಕಳನ್ನು ಕರೆದುಕೊಂಡು ಬನ್ನಿ.

ಮತ್ತೇನು ವಿಶೇಷವಿಲ್ಲ.

ಇತಿ,
ರಾಮಸ್ವಾಮಿ.

ಕಾಗದ ಓದುತ್ತಾ ಹೋದಂತೆ ಸಾವಿತ್ರಿಗೆ ಗಾಬರಿಯಾಗತೊಡಗಿತು. ಮೊದಲೇ ಕಾಗದ ಬರಿಯಬಾರದಾಗಿತ್ತೆ? ಮನೆಯಲ್ಲಿ ಅಲ್ಲಿ ಯಾರಿದ್ದಾರೆ ನೋಡಿಕೊಳ್ಳುವುದಕ್ಕೆ? ಅಂತೂ ಏನಾದರು ಆಗಲಿ ಎಲ್ಲರೂ ಹೋಗಿಬಿಡಲೇ

ಬೇಕು. ಸಾವಿತ್ರಿಯ ಮನಸ್ಸಿನಲ್ಲಿ ಆತುರ ಹೆಚ್ಚುತ್ತಿತ್ತು. ಈಗೇನು ಮಾಡುವುದು? ಅವರಿಗೆ ರಜವು ಸಿಕ್ಕುವುದೋ ಇಲ್ಲವೊ!

ರಾಧ ಕಾಫಿ ಮಾಡಿ ತಂದಿಟ್ಟಳು. ಸಾವಿತ್ರಿಯ ಮುಖವನ್ನೊಮ್ಮೆ ವೀಕ್ಷಿಸಿದಳು. ಗಾಬರಿ-ಶಂಕೆಯಿಂದ ಕೂಡಿತ್ತು ಆ ಮುಖ.

"ಏನು ಸಮಾಚಾರ ಅಕ್ಕಾ", ರಾಧ ಕೇಳಿದಳು.

"ನಮ್ಮ ತಾಯಿಗೆ ತೀವ್ರ ಜ್ವರವಂತೆ. ನೋಡು ಅವರು ಮೊದಲೇ ಕಾಗದ ಬರೆದು ತಿಳಿಸಬಾರದಾಗಿತ್ತೆ? ಅಲ್ಲಿ ಊಟ-ಉಪಚಾರ ನೋಡಿ ಕೊಳ್ಳುವುದಕ್ಕೆ ಯಾರೂ ಇಲ್ಲ."

"ಹಾಗಾದರೆ ಈಗ ಕಾಗದದಲ್ಲಿ ಬಾ ಅಂತ ಬರೆದಿದ್ದಾರೇನು?"

"ಹೂ, ಬರೆದಿದ್ದಾರೆ. ಎಲ್ಲರೂ ಬನ್ನಿ ಅಂತ."

"ಹಾಗಾದರೆ ಈ ದಿನವೇ ಹೋಗಿಬಿಟ್ಟು ಬನ್ನಿ."

ಸ್ವಲ್ಪ ಮೌನ ತಳೆದು ಮತ್ತೆ ಹೇಳಿದಳು ಸಾವಿತ್ರಿ—

"ಇಲ್ಲಿ ಯಾರೂ ಇಲ್ಲವಲ್ಲ. ಹುಡುಗರು ಸ್ಕೂಲಿಗೆ ಹೋಗಬೇಕು. ಅವರಿಗೆ ರಜೆ ಸಿಗುತ್ತದೆಯೋ ಇಲ್ಲವೊ? ಅದೇ ನನಗೆ ಸಂದೇಹ."

"ಅದು ಯಾಕಕ್ಕಾ ಹಾಗನ್ನುತ್ತೀರಿ! ನಾನಿಲ್ಲವೆ? ಮನೆ ನೋಡಿ ಕೊಳ್ಳುವುದಕ್ಕೆ. ಹುಡುಗರು ಸ್ಕೂಲಿಗೆ ಹೋಗಿ ಬರ್ತಾರೆ. ನೀವೂ ಮತ್ತು ಅಣ್ಣ ಇಬ್ಬರೂ ಹೋಗಿಬಿಟ್ಟು ಬನ್ನಿ!"

"ಅವರು ಬರಲಿ. ಅವರನ್ನೂ ಒಂದು ಮಾತು ಕೇಳೋಣ."

ಅಡುಗೆ ಮನೆಯಲ್ಲಿ ಒಲೆಯ ಮೇಲೆ ಇಟ್ಟಿದ್ದ ಅನ್ನ ಕುದಿಯುತ್ತ ಲಿತ್ತು. ಅದನ್ನು ನೋಡಲು ರಾಧ ಒಳಗೆ ತೆರಳಿದಳು. ಸಾವಿತ್ರಿಯ ಸಮಸ್ಯೆಯು ಬಗೆಹರಿಯಲಿಲ್ಲ.

೬

ಸಾಯಂಕಾಲವಾಗುತ್ತಾ ಬಂದಿತು. ಸ್ಕೂಲಿಗೆ ಹೋಗಿದ್ದ ಶಂಕರ-ಶಾರದ ಮತ್ತು ಶಶಿಧರ ಪುಸ್ತಕಗಳೊಡನೆ ಒಳಗೆ ಓಡಿಬಂದರು.

ಶಂಕರ-ಶಶಿಧರ ಆಗತಾನೆ ಎಲ್. ಎಸ್. ಪರೀಕ್ಷೆಗೆ ಕುಳಿತಿದ್ದರು.

ಇಬ್ಬರೂ ಒಂದೇ ತರಗತಿ. ಶಾರದೆ ಇನ್ನೂ ಸೆಕೆಂಡಿಯರ್ ಕ್ಲಾಸು. ಬುದ್ಧಿಯಲ್ಲಿ ಶಂಕರ ಮುಂದಾಳು. ವಿದ್ಯೆಯಲ್ಲಿ ಅಷ್ಟೆ, ಜಾಣ. ಸ್ಕೂಲಿನಲ್ಲಿ ಹುಡುಗರೆಲ್ಲರಿಗೂ ಶಂಕರನನ್ನು ಕಂಡರೆ ಪ್ರೀತಿ.

ಐದುವರೆಘಂಟೆ ಆಯಿತು. ಶ್ರೀನಿವಾಸಯ್ಯ ಆಫೀಸಿನಿಂದ ಮನೆಗೆಬಂದ. ಒಳಗೆ ಬಂದವನೇ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಸಾವಿತ್ರಿ ಅಡುಗೆ ಮನೆಗೆ ಹೋಗಿ ಒಂದು ಪ್ಲೇಟ್ ಉಪ್ಪಿಟ್ಟನ್ನೂ ಮತ್ತು ಒಂದು ಕಪ್ ಕಾಫಿಯನ್ನೂ ಮುಂದೆ ತಂದಿಟ್ಟಳು. ಕುಳಿತ ಶ್ರೀನಿವಾಸಯ್ಯ ತಿನ್ನಲು ಮೊದಲು ಮಾಡಿದನು. ಮತ್ತೆ ಅರ್ಧ ಘಂಟೆ ಮೌನ.

ಸಾವಿತ್ರಿ ರೂಮಿಗೆ ಹೋಗಿ ತಂದೆಯಿಂದ ಬಂದಿದ್ದ ಕಾಗದವನ್ನು ತೋರಿಸಿದಳು. ಶ್ರೀನಿವಾಸಯ್ಯ ಕೈಗೆ ತೆಗೆದುಕೊಂಡು ಓದಿದನು.

ಸಾವಿತ್ರಿ ಆಶೆ ಅಂಕುರಿಸಿದ ಮುಖದಿಂದ ನೋಡುತ್ತಿದ್ದಳು.

ಪತ್ರ ಮುಗಿಸಿದವನೇ ಕೇಳಿದ,–

"ಈಗ ಏನು ಮಾಡಬೇಕೂ ಅನ್ನುತ್ತೀಯಾ?"

"ಏನು ಮಾಡುವುದು ನೀವೇ ಹೇಳಿ?"

"ನೋಡು ಅಲ್ಲಿಗೆ ಹೋದರೆ ಹದಿನೈದು ದಿನವಾದರೂ ಆಗುತ್ತೆ. ನನಗೆ ಈಗ ಆಫೀಸಿನಲ್ಲಿ ಬಹಳ ಕೆಲಸ. ಅಷ್ಟೊಂದು ದಿನ ರಜತಾನೆ ಎಲ್ಲಿ ಕೊಡ್ತಾರೆ? ಅದಕ್ಕೋಸ್ಕರ ನೀನೇ ಹೋಗಿ ಬಂದುಬಿಡು."

"ಹಾಗೆ ಮಾಡಿದರೆ ಚೆನ್ನಾಗಿರುತ್ತೆ? ನೀವು ಬರಲೇಬೇಕು. ಏನೋ ಅಮ್ಮನಿಗೆ ಖಾಯಿಲೆ."

"ಹೋಗಲಿ ಒಂದು ವಾರ ರಜ ಬೇಕಾದರೆ ತೆಗೆದುಕೊಳ್ಳುತ್ತೀನಿ. ಮತ್ತಷ್ಟುದಿನ ಬೇಕಾದರೆ ನೀನು ಅಲ್ಲೇ ಇರು. ನಾನು ಹಿಂತುರಿಗಿ ಮತ್ತೆ ಬಂದುಬಿಡುತ್ತೀನಿ. ಆದು ಸರಿ......ಮನೆಯಲ್ಲಿ....?"

"ರಾಧ-ಶಶಿಧರ ಇರುತ್ತಾರೆ. ಅವಳೇ ಹೇಳಿದಳು. ನಾನು ಇರುತ್ತೀನಿ. ನೀವು ಹೋಗಿ ಬನ್ನಿ ಅಂತ."

ರಾಧ ಆದೇತಾನೆ ಅಡುಗೆ ಮನೆಯಿಂದ ಹೊರಗೆ ಬಂದಳು. ಸಾವಿತ್ರಿ ಹೇಳಿದಳು.—

"ಹಾಗಾದರೆ ನೀನು ಏನು ಹೇಳುತ್ತೀ ರಾಧಾ?"

"ನಾವು ಮನೆಯಲ್ಲಿ ನೋಡಿಕೊಂಡು ಇರುತ್ತೀವಿ. ನೀವು ಹೋಗಿ ಬನ್ನಿ."

ಅಂತೂ ಕಡೆಗೆ ಶಂಕರ-ಶಾರದೆಯನ್ನು ಮನೆಯಲ್ಲಿ ಇರಿಸಿ ಹೋಗುವ ಏರ್ಪಾಡಾಯಿತು.

ಸಾವಿತ್ರಿ ಮತ್ತು ಶ್ರೀನಿವಾಸಯ್ಯ ಇಬ್ಬರೂ ಹೋಗಲು ನಿಶ್ಚಯ ಮಾಡಿದರು.

ರಾತ್ರಿ ಹತ್ತೂವರೆ ಘಂಟೆಗೆ ಪ್ಯಾಸೆಂಜರ್ ರೈಲು. ಅದಕ್ಕೆ ಹೋಗಲು ಎಲ್ಲಾ ಸಿದ್ಧತೆ ನಡೆಯಿತು. ಶ್ರೀನಿವಾಸಯ್ಯ ಶಂಕರ-ಶಾರದೆಯರನ್ನು ಕರೆದು ಅವರ ಕೈಗೆ ಒಂದೊಂದು ರೂಪಾಯಿ ಕೊಟ್ಟ.

"ನಾವು ಬರುವತನಕ ಅಕ್ಕನು ಹೇಳಿದ ಹಾಗೆ ಕೇಳಿಕೊಂಡು ಸ್ಕೂಲಿಗೆ ಹೋಗಿ ಬರುತ್ತಿರಿ."-ಸಾವಿತ್ರಿ ಹೇಳಿದಳು.

ಶಂಕರನಿಗೆ ತಾನೂ ಅಮ್ಮ-ಅಪ್ಪಂದಿರ ಜೊತೆಯಲ್ಲಿ ಅಜ್ಜಿಯನ್ನು ನೋಡಬೇಕೆಂಬ ಆಸೆ. ಆದರೆ ತನ್ನನ್ನು ಕರೆಯಲೇ ಇಲ್ಲ. ಶಾರದೆಗೆ ಹೇಳಿಕೊಂಡು ಅತ್ತನು. ಶಾರದೆ ಸಮಾಧಾನ ಮಾಡಿದಳು.

"ಅಳಬೇಡ ಶಂಕರೂ, ಅವರೇ ಹೋಗಿ ಬರಲಿ. ಮನೆಯಲ್ಲಿ ಯಾರಿರ್ತಾರೆ ಹೇಳು ನೋಡಿಕೊಳ್ಳುವುದಕ್ಕೆ. ಅದೂ ಅಲ್ಲದೆ ಪರೀಕ್ಷೆ ಹತ್ತಿರ ಬರುತ್ತಿದೆ. ಓದಿಕೊಳ್ಳಬೇಡವಾ?"

ಅಂತೂ ಕಡೆಗೆ ಸಮಾಧಾನವಾಯಿತು.

ಶ್ರೀನಿವಾಯ್ಯ ಮಾರನೆಯ ದಿನ ರಾತ್ರಿ ಹತ್ತುಘಂಟೆಗೆ ರೈಲಿಗೆ ಹೋಗಲು, ಜಟಕಾಗಾಡಿಯನ್ನು ಕರೆದುಕೊಂಡು ಬಂದ. ಬೆಳಿಗ್ಗೆ ರಜೆಗೆಬರೆದು ಕೊಟ್ಟಿದ್ದ. ರಜೆಯು ಒಂದು ವಾರ ಮಾತ್ರ. ಹಾಸಿಗೆ-ಟ್ರಂಕುಗಳನ್ನು ಗಾಡಿಯಲ್ಲಿಟ್ಟು—

"ಹೋಗಿ ಬರ್ತೀವಿ ರಾಧಮ್ಮ. ನಾವು ಬರೋವರೆಗೆ ಮನೆ ನೋಡಿಕೊಳ್ಳುತ್ತಿರಿ. ಬೇಗಲೆ ಬಂದು ಬಿಡುತ್ತೀವಿ" ಎಂದು ಹೇಳಿದ.

ರಾಧ ಹೇಳಿದಳು, "ಹಾಗೆ ಆಗಲಿ ನೀವು ನಿಶ್ಚಿಂತೆಯಿಂದ ಹೋಗಿಬನ್ನಿ."

ಗಾಡಿಯಲ್ಲಿ ಕುಳಿತು ಮಕ್ಕಳನ್ನು ತಬ್ಬಿ ಹೇಳಿದಳು ಸಾವಿತ್ರಿ,

"ಹೋಗಿ ಬರುತ್ತೀವಿ ಶಂಕರಾ. ದಿನವೂ ಶಾರದೆಯನ್ನು ಕರೆದುಕೊಂಡು ಸ್ಕೂಲಿಗೆ ಹೋಗಿ ಬಾ. ಮನೇಕಡೆಗೆ ಜೋಪಾನ; ಎಂದು ಹೇಳಿದಳು.

ಅಂತೂ ಗಾಡಿ ಮುಂದೆ ಸಾಗಿತು. ಮದುವೆಯಾಗಿ ಗಂಡನ ಮನೆಗೆ ಬಂದ ಮೇಲೆ, ತೌರು ಮನೆಗೆ ಹೋಗುತ್ತಿರುವುದು ಇದು ಎರಡನೇ ಬಾರಿ. ತಾಯಿ-ತಂದೆಯನ್ನು ನೋಡಿ ಎಷ್ಟೋ ದಿವಸ ಆಗಿತ್ತು. ಈಗ ನೋಡ ಬಹುದಲ್ಲಾ!

ಅಂತೂ ರೈಲು ಊರು ಮುಟ್ಟಿತು. ರೈಲು ಇಳಿದು ಯಾವುದೋ ಗಾಡಿಯನ್ನು ಕರೆತಂದು ಸಾಮಾನುಗಳನ್ನು ಇಟ್ಟು ಒಳಗೆ ಸಾವಿತ್ರಿಯನ್ನು ಕೂಡಿಸಿ ತಾನೂ ಹತ್ತಿದ ಶ್ರೀನಿವಾಸಯ್ಯ. ಅರ್ಧ ಘಂಟೆ ಕಳೆದ ಕೂಡಲೆ ಗಾಡಿ ಅತ್ತೆಯ ಮನೆ ಮುಟ್ಟಿತು.

## ೭

ವೇದಾವತಮ್ಮನವರ ಹಾಸಿಗೆ ಬಳಿಯೇ ಕುಳಿತಿದ್ದರು ರಾಮಸ್ವಾಮಿ. ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಜಾಗರಣೆ ಮಾಡಿದಂತಾಗಿತ್ತು. ಅದೇ ಸಮಯಕ್ಕೆ ಹೊರಗೆ ಗಾಡಿಯ ನಡಿಗೆಯ ಶಬ್ದ ಕೇಳಿಸಿತು. ಮಗಳು-ಅಳಿಯ ಒಹುಶಃ ಬಂದಿರಬಹುದೇನೊ ಅಂದುಕೊಂಡು. ಕೂಡಲೆ ಎದ್ದು ಹೊರ ಬಾಗಿಲ ಬಳಿ ಬಂದರು.

ಆಗತಾನೆ ಗಾಡಿಯಿಂದ ಇಳಿದರು ಸಾವಿತ್ರಿ–ಶ್ರೀನಿವಾಸಯ್ಯ. ಗಾಡಿ ಯವನು ಎಲ್ಲಾ ಸಾಮಾನುಗಳನ್ನು ತಂದು ಒಳಗೆ ಇಟ್ಟ. ರಾಮಸ್ವಾಮಿ ಯವರು ಕೂಡಲೇ ಹೋಗಿ ಅಳಿಯನಿಗೆ ಸ್ವಾಗತ ನೀಡಿದರು. ತಂದೆಯನ್ನು ನೋಡಿದ ಕೂಡಲೇ ಸಾವಿತ್ರಿ 'ಅಪ್ಪಾ' ಎಂದು ಓಡಿ ಬಂದಳು. ಬಹಳ ದಿನಕ್ಕೆ ಬಂದ ಮಗಳು, ಅಳಿಯನನ್ನು ನೋಡಿ ಅವರಿಗೆ ಹರ್ಷವಾಯಿತು. ಸುತ್ತಲೂ ನೋಡಿದರು. ಮಕ್ಕಳಿರಲಿಲ್ಲ. ಕಡೆಗೆ ಕೇಳಿದರು,

"ಯಾಕೆ ಮಕ್ಕಳು ಬರಲಿಲ್ಲವೆ?"

"ಇಲ್ಲ. ಅವರು ಸುಮ್ಮನೆ ಕಾಲ ವ್ಯರ್ಥ ಮಾಡಬೇಕು ಅಂತ.

ಅದೂ ಅಲ್ಲದೆ ಸ್ಕೂಲಿಗೆ ತಪ್ಪಿಸಿಕೊಳ್ಳಬೇಕು." ಎಂದು ಶ್ರೀನಿವಾಸಯ್ಯ ಹೇಳಿದ.

"ಅದು ಸರಿ. ಮನೆಯಲ್ಲಿ ಎರಡೇ ಮಕ್ಕಳಲ್ಲವೆ?"-ರಾಮಸ್ವಾಮಿಗಳು ಕೇಳಿದರು.

"ಇಲ್ಲ. ಈಗ ಇನ್ನೊಬ್ಬರು ನಮ್ಮ ಮನೆಗೆ ಬಂದಿದ್ದಾರೆ. ರಾಧಮ್ಮ ಅಂತ. ಮನೆ ಎಲ್ಲಾ ನೋಡಿಕೊಳ್ಳುತ್ತಾಳೆ. ಬಹಳ ಒಳ್ಳೆಯವಳು." —ಸಾವಿತ್ರಿ ಹೇಳಿದಳು.

ಕೂಡಲೆ ಸಾವಿತ್ರಿ ಒಳಗೆ ಬಂದಳು.

ಒಳಗೆ ಹಾಸಿಗೆಯ ಮೇಲೆ ನೇದಾತತಮ್ಮನವರು ಮಲಗಿದ್ದರು. ಸುಕ್ಕು ಸುಕ್ಕಾದ ಮುಖ. ಖಾಯಿಲೆಯಿಂದ ನರಳಿ ಬೇಸತ್ತಿದ್ದ ಒಣ ದೇಹ. ತಲೆಯನ್ನು ಬಾಚಿ ಎಷ್ಟೋ ದಿನ ಕಳೆದುಹೋಗಿತ್ತು. ಕೂದಲು ಕೆದರಿ ಹೋಗಿ ಮುಖದ ಮೇಲೆ ಅಸ್ತವ್ಯಸ್ತವಾಗಿತ್ತು. ಹಣೆಯಲ್ಲಿ ಕುಂಕುಮ ಮಾತ್ರ ಹೊಳೆಯುತ್ತಿತ್ತು.

ಒಳಗೆ ಓಡಿ ಬಂದವಳೇ ಸಾವಿತ್ರಿ ತಾಯಿಯನ್ನು ತಬ್ಬಿದಳು. ಅದೇ ತಾನೆ ಅವರಿಗೆ ಎಚ್ಚರವಾಗಿತ್ತು. ಹೊಳಪಿಲ್ಲದ, ಮುಖದಲ್ಲಿ, ಗುಳಿ ಬಿದ್ದಂತಿದ್ದ ಕಣ್ಣುಗಳಿಂದ ವೀಕ್ಷಿಸಿದರು. ಮಗಳು ಎಂದು ತಿಳಿದ ಕೂಡಲೆ ತೇಜಸ್ಸು ರಹಿತವಾಗಿ ವದನದಲ್ಲಿ ಮಂದಹಾಸದ ಕಿರುನಗೆ ಬೀರಿತು. ಶಕ್ತಿಯಿಲ್ಲದ ನಿಶ್ಚೇಷ್ಟಿತವಾದ ಕೈಯಿಂದ ಮಗಳ ತಲೆಯನ್ನು ನೇವರಿಸಿದರು.

"ಅವರೂ ಬಂದರೆ?" ಕ್ಷೀಣವಾಗಿದ್ದ ಧ್ವನಿಯಿಂದ ಕೇಳಿದರು.

"ಹೂಂ"—ಸಾವಿತ್ರಿ ತಲೆಯಾಡಿಸಿದಳು.

"ಶಂಕರ-ಶಾರದೆ?"

"ಇಲ್ಲ. ಅವರು ಅಲ್ಲೇ ಇದ್ದಾರೆ. ಸ್ಕೂಲಿಗೆ ತಪ್ಪಿಸಿಕೊಳ್ಳಬೇಕಾಗುತ್ತೆ. ಪರೀಕ್ಷೆ ಹತ್ತಿರ ಬರುತ್ತಿದೆ...."

"ಅಲ್ಲಿ ಇಬ್ಬರೆ ಆಯ್ತಲ್ಲಾ?"

"ಇಲ್ಲ. ಇನ್ನೊಬ್ಬಳು ರಾಧಮ್ಮ ಅಂತ ಬಂದಿದ್ದಾಳೆ. ಬಹಳ ಒಳ್ಳೆಯವಳು..........." ಸಾವಿತ್ರಿ ರಾಧೆಯ ಪೂರ್ತಿ ಪರಿಚಯ ಮಾಡಿ ಕೊಟ್ಟಳು.

ಮತ್ತೆ ಸಾವಿತ್ರಿ ಕೇಳಿದಳು,

"ಈಗ ಹೇಗಿದೆ ಅಮ್ಮಾ?"

"ಏನೋಮ್ಮ ಹೇಳಲಾರೆ. ದಿನದಿನಕ್ಕೆ ಮೈಯಲ್ಲಿ ಶಕ್ತಿ ಉಡುಗಿ ಹೋಗುತ್ತಿದೆ. ನಿನ್ನೆ 109 ಡಿಗ್ರಿ ಜ್ವರ ಇತ್ತು. ದಿನಾಲೂ ಹೀಗೇನೆ. ನನಗಂತೂ ನಂಬಿಕೆ ಇಲ್ಲ. ಅವರೇ ಇನ್ನೂ ಏನೇನೋ ಮಾಡುತ್ತಿದ್ದಾರೆ. ನಾನು ಖಂಡಿತ ಉಳಿ........"

ತಕ್ಷಣ ಬಾಯಿಗೆ ಅಡ್ಡವಾಗಿ ಕೈಯಿಟ್ಟು ಹೇಳಿದಳು ಸಾವಿತ್ರಿ,

"ಸುಮ್ಮನೆ ಇಲ್ಲದ್ದೆಲ್ಲಾ ಅನ್ನಬೇಡಮ್ಮ. ಏನು ಮಹಾ ಈ ಜ್ವರ. ಬೇಗಲೇ ಖಂಡಿತ ಗುಣವಾಗುತ್ತೆ."

ರಾಮಸ್ವಾಮಿಯವರು ಅಳಿಯನೊಂದಿಗೆ ಮಾತನಾಡುತ್ತಾ ಬಂದರು.

ಬಂದವರೇ ಶ್ರೀನಿವಾಸಯ್ಯ ಅತ್ತೆಯ ಕಾಲನ್ನು ಮುಟ್ಟಿ ನಮಸ್ಕಾರ ಮಾಡಿದರು. ಕ್ಷೀಣವಾದ ಧ್ವನಿಯಿಂದ ಆಶೀರ್ವದಿಸಿದರು ವೇದವತಮ್ಮ "ಹತ್ತು ಮಕ್ಕಳ ತಂದೆಯಾಗಿ ನೂರು ವರ್ಷ ಬಾಳಪ್ಪಾ" ಎಂದು.

"ಈಗ ಹೇಗಿದೆ?"—ಶ್ರೀನಿವಾಸಯ್ಯ ಕೇಳಿದ.

"ಏನೋ ಅಂತೂ ಹತ್ತಿದ ಜ್ವರ ಇಳಿಯಲಿಲ್ಲ...."ಕೆಮ್ಮಲು ಅಡ್ಡವಾಗಿ ಬಂದು ಮಾತನ್ನು ಅಷ್ಟಕ್ಕೆ ನಿಲ್ಲಿಸಿತು.

"ಹೋಗಲಿ ಅತ್ತೆ. ವಿಶ್ರಾಂತಿ ತೆಗೆದುಕೊಳ್ಳಿ. ನಿದ್ರೆ ಮಾಡಿ. ಆ ಮೇಲೆ ಮಾತನಾಡೋಣ!"

ಬಳಲಿದ್ದ ಆ ಕಣ್ಣುಗಳು ಹಾಗೆ ಮುಚ್ಚಿಕೊಂಡವು.

## ೮

ದಿನದಿನಕ್ಕೆ ವೇದವತಮ್ಮನವರ ಮೈ ಬಡವಾಯಿತು. ಶ್ರೀನಿವಾಸಯ್ಯ ಬಂದು ಆಗಲೆ ಮೂರು ದಿನಗಳಾಯಿತು. ದಿನದಿನಕ್ಕೆ ಒಂದೊಂದು ಡಿಗ್ರಿ ಹೆಚ್ಚಾಗುತ್ತಾ ಹೋಯಿತು. ಜ್ವರವು ತೀವ್ರವಾಗಿ ಬರುತ್ತಿತ್ತು. ದೇಹ ಕಾದ ಕಬ್ಬಿಣದಂತಾಗಿತ್ತು. ಎಷ್ಟೆಷ್ಟೋ ಔಷಧಿಗಳಾಯಿತು. ಅಂತೂ ಗುಣ ಮುಖವಾಗುವ ಯಾವ ಚಿಹ್ನೆಯೂ ಕಾಣಲಿಲ್ಲ.

ರಾತ್ರಿ ಒಂಭತ್ತು ಘಂಟೆಯಾಗಿತ್ತು. ಎಲ್ಲರ ಊಟವೂ ತೀರಿತ್ತು. ಮಲಗುವ ಮುನ್ನ ವೇದವತಮ್ಮನವರ ಹಾಸಿಗೆಯ ಬಳಿ ಸಾವಿತ್ರಿ ಬಂದಳು. ಅವರ ಮುಖ ಮಂದಹಾಸ ಬೀರುತ್ತಿತ್ತು. ಎರಡು ಮೂರು ಬಾರಿ ಬಂದ ಕೆಮ್ಮಿನಿಂದ ಅಲ್ಲುಗಾಡಿದರು. ಪಕ್ಕದಲ್ಲಿ ಕುಳಿತಿದ್ದ ಸಾವಿತ್ರಿಯು ಗೋಚರವಾಯಿತು, ಮೆಲ್ಲಗೆ ಕಣ್ಣು ಬಿಟ್ಟರು, ಸಾವಿತ್ರಿ ಕಡೆಗೆ ಕಿರುನಗೆ ಬೀರಿದರು. ಮೆಲ್ಲಗೆ ಕೈಸನ್ನೆಯಿಂದ ಕೇಳಿದರು-"ಅವರೆಲ್ಲಿ?" ಎಂದು,

ಸಾವಿತ್ರಿ ಹೇಳಿದಳು "ಹೊರಗೆ ಮಾತನಾಡುತ್ತಾ ಇದ್ದಾರೆ. ಕರೆಯಲೇನು?"

ವೇದವತಮ್ಮನವರು ತಲೆಯಲ್ಲಾಡಿಸಿದರು.

ಸಾವಿತ್ರಿ ಹೊರಗೆ ಬಂದು ಹೇಳಿದಳು. "ಅಪ್ಪಾ, ನಿಮ್ಮನ್ನು ಕರೆಯುತ್ತಿದ್ದಾಳೆ ಅಮ್ಮ."

ಏಕಿರಬಹುದು?

ತಕ್ಷಣ ರಾಮಸ್ವಾಮಿ ಎದ್ದು ಒಳಗೆ ಬಂದರು. ಶ್ರೀನಿವಾಸಯ್ಯ ಅವರನ್ನು ಹಿಂಬಾಲಿಸಿದ. ನೆಟ್ಟ ನೋಟದಿಂದ ಬಾಗಿಲೆಡೆ ನೋಡುತ್ತಿದ್ದರು ವೇದವತಮ್ಮನವರು.

ಪತಿಯನ್ನು ಕಂಡ ಕೂಡಲೇ ಮುಗುಳ್ನಗೆ ನಕ್ಕರು. 'ಇಲ್ಲಿ ಬನ್ನಿ' ಎನ್ನುವಂತೆ ತಲೆಯಾಡಿಸಿದರು.

ರಾಮಸ್ವಾಮಿಯವರು ಹಾಸಿಗೆಯ ಬಳಿ ಬಂದರು. ಚೇತನ ರಹಿತವಾದ

ಪತ್ನಿಯ ಹಸ್ತವನ್ನು ಕೈಗೆ ತಿಗೆದುಕೊಂಡು ಪ್ರಶ್ನಾರ್ಥಕ ದೃಷ್ಟಿಯನ್ನು ಪತ್ನಿಯ ಕಡೆಗೆ ಬೀರಿದರು.

"ಕಳಿತುಕೊಳ್ಳಿ"–ವೇದವತಮ್ಮನವರು ಹೇಳಿದರು. ಇದ್ದಕ್ಕಿದ್ದಹಾಗೆ ಅವರ ಕಣ್ಣಿನಿಂದ ಕಣ್ಣೀರು ಹರಿಯಲಾರಂಭಿಸಿತು.

ವೇದವತಮ್ಮನವರು ಕೆಳಗೆ ಬಗ್ಗಿ ಪತಿಯ ಕಾಲನ್ನು ಮುಟ್ಟಿ ಕಣ್ಣಿ ಗೊತ್ತಿಕೊಂಡರು.

ಮತ್ತೊಮ್ಮೆ ನಗು ಬೀರಿ, "ಹೋಗಿ ಬರುತ್ತೇನೆ ಸ್ವಾಮಿ! ಜನ್ಮ ಜನ್ಮಾಂತರಕ್ಕೂ ತಾವೇ ನನ್ನ ಸ್ವಾಮಿಯಾಗಲಿ" ಎಂದರು.

"ಇದೇನಿದು ವೇದೂ, ಏನು ಹೇಳುತ್ತಿದ್ದಿ?" ಅರ್ಥವಾದರೂ ತಿಳಿ ಯದೆಯೇ ಕೇಳಿದರು.

ಅವರ ಪ್ರಶ್ನೆಗೆ ಉತ್ತರ ಬರಲಿಲ್ಲ. ವೇದವತಮ್ಮನವರು ಮತ್ತೊಮ್ಮೆ ಮುಂದೆ ನಿಂತಿದ್ದ ಮೂವರನ್ನೂ ನೋಡಿದರು. ಕೈ ನೀಡಿ ಸಾವಿತ್ರಿಯ ಕೈಯನ್ನು ತೆಗೆದು ಶ್ರೀನಿವಾಸಯ್ಯನ ಹಸ್ತದಲ್ಲಿ ಸೇರಿಸಿದರು. "ಇದು ನನ್ನ ಪ್ರಾರ್ಥನೆ" ಎಂದು ತುಟಿಯನ್ನು ಅಲುಗಿಸಿದರು.

ಮುಖದಲ್ಲಿ ಅಪೂರ್ವ ಬೆಳಕು ಒಮ್ಮೆಲೆ ಮೂಡಲಾರಂಬಿಸಿತು. ನೋಡ ನೋಡುತ್ತಿರುವಾಗಲೆ ಮುಖ ಪಕ್ಕಕ್ಕೆ ತಿರುಗಿತು. ಪ್ರಾಣವಾಯ್ಯು ಹಾರಿಹೋಯಿತು.

"ಅಮ್ಮಾ", ಎಂದು ಚೀರಿ ಅವರ ಕಾಲಬಳಿ ಬಿದ್ದಳು ಸಾವಿತ್ರಿ.

ರಾಮಸ್ವಾಮಿಯವರು ಎರಡು ಕೈಗಳನ್ನು ತಮ್ಮ ಮುಖಕ್ಕೆ ಮುಚ್ಚಿ ಕೊಂಡು ಎಳೆಯ ಮಗುವಿನಂತೆ ಬಿಕ್ಕಳಿಸಲಾರಂಭಿಸಿದರು.

ಶ್ರೀನಿವಾಸಯ್ಯನ ಕಣ್ಣಲ್ಲೂ ಗಂಗಾನದಿ.

೬

ಸುತ್ತಲಿನ ವಾತಾವರಣ ನಿಶ್ಯಬ್ಧತೆಯಿಂದ ಕೂಡಿತ್ತು. ಅಂತ್ಯ ಸಂಸ್ಕಾರ ಗಳು ನೆರವೇರಿತು. ಯಾರ ಬಾಯಲ್ಲೂ ಮಾತೇ ಹೊರಡದು. ಯಾವುದೋ

ಒಂದು ಭೂತ ಮನೆಯಲ್ಲಿ ಹೊಕ್ಕಿದಂತೆ ಭಾಸವಾಗುತ್ತಿತ್ತು. ಮನೆಯಲ್ಲಿ ರಾರಾಜಿಸುತ್ತಿದ್ದ ಲಕ್ಷ್ಮಿ ಮಾಯವಾಗಿದ್ದಳು. ಊಟ-ನಿದ್ರೆ ಒಂದೂ ಬೇಕಾಗಿರಲಿಲ್ಲ. ಯಾವುದೋ ಊಹೆಗೆ ಸಿಲುಕಲಾರದ ಸಮಸ್ಯೆಯು ಎದುರು ಸುಳಿಯುತಿತ್ತು. ಸಾವಿತ್ರಿಯ ಕಣ್ಣುಗಳಂತೂ ಕೆಂಡದಂತೆ ಕೆಂಪಾಗಿತ್ತು.

ಅಂತೂ ಮೌನದಲ್ಲಿಯೇ ಮೂರು ದಿನಗಳು ಕಳೆದು ಹೋಯಿತು. ಸಂಸಾರ ಚಕ್ರ ಮತ್ತೆ ಆರಂಭ ಆಗಬೇಕಲ್ಲಾ. ಹೋದವರು ಅತ್ತರೆ ಮರಳಿ ಬರುತ್ತಾರೆಯೆ ? ಶ್ರೀನಿವಾಸಯ್ಯನ ರಜೆ ಇನ್ನು ಒಂದು ದಿನ ಮಾತ್ರ ಉಳಿದಿತ್ತು. ಅಂತೂ ಮೌನವನ್ನು ಭೇದಿಸಬೇಕಾಗಿತ್ತು. ಸಾವಿತ್ರಿಯನ್ನು ಕರೆದು ಕೇಳಿದನು.

ಗಂಡನ ಮುಖ ನೋಡಿದ ಕೂಡಲೆ ಸಾವಿತ್ರಿಯು ಅವನ ಎದೆಯ ಮೇಲೆ ತಲೆಯಿಟ್ಟು ಅತ್ತುಬಿಟ್ಟಳು. ಅವಳ ತಲೆಯನ್ನು ಸವರುತ್ತಾ ಸಮಾಧಾನ ಹೇಳಲಾರಂಬಿಸಿದನು, ಕಡೆಗೆ ಹೇಳಲೇಬೇಕಾಗಿ ಬಂತು.

"ನನ್ನ ಏಳು ದಿನದ ರಜ ಮುಗಿದು ಹೋಯಿತು ಸಾವಿತ್ರಿ ! ನಾನು ಕೆಲಸಕ್ಕಾಗಿ ಊರಿಗೆ ಮರಳಿ ಹೋಗಬೇಕಲ್ಲಾ...."

"ಮನೆಯಲ್ಲಿ ಯಾರೂ ಇಲ್ಲವೇ ಇಲ್ಲ. ಅಪ್ಪಾ ಕಂಗಾಲಾಗಿದ್ದಾರೆ ?"

"ಸಾವಿತ್ರಿ ! ನೀನು ಇಲ್ಲೇ ಇರು. ನಾನು ಮಾತ್ರ ಊರಿಗೆ ಹೋಗುತ್ತೀನಿ. ಹೋಗಲೇ ಬೇಕಲ್ಲವೆ ? ಇನ್ನೊಂದು ತಿಂಗಳು ಬಿಟ್ಟು ಬೇಕಾದರೆ ಬಾ. ಅದುವರೆವಿಗೆ ಮಾವನವರ ಹತ್ತಿರವೇ ಇರು."

"ಹಾಗೇ ಮಾಡಬೇಕು." ಸಾವಿತ್ರಿ ಬೇರೊಂದು ಉಪಾಯ ತೋಚದೆ ಹೇಳಿದಳು.

ತಂದೆಗೂ, ಗಂಡನ ಪ್ರಯಾಣದ ಸುದ್ದಿಯನ್ನು ಹೇಳಿದಳು. ಕಾರಣವನ್ನು ತಿಳಿದು ಅವರು ಸುಮ್ಮನಾದರು.

ಶ್ರೀನಿವಾಸಯ್ಯ ಹೊರಟು ನಿಂತನು, ಮಾವ ಮತ್ತು ಹೆಂಡತಿಗೆ ಹೇಳಿ ಹೊರಟನು. ಹೆಂಡತಿಯ ಕಣ್ಣೀರೇ ಅವನನ್ನು ಹಿಂದಕ್ಕೆ ಕರೆಯುತಿತ್ತು. ಆದರೇನು ?

"ಆದಷ್ಟು ಜಾಗ್ರತೆ ಬನ್ನಿ" ಎಂದು ಮಾವನಿಗೆ ಹೇಳಿ ಪ್ರಯಾಣ ಮಾಡಿದ.

## ೧೦

ಹೆಂಡತಿಯಿಲ್ಲದ ಮನೆ ಶ್ರೀನಿವಾಸಯ್ಯನನ್ನು ಸ್ವಾಗತಿಸಿತು. ಮನೆಯಲ್ಲಿ ಏನೊಂದೂ ಬದಲಾವಣೆಯಾಗಿರಲಿಲ್ಲ. ಎಲ್ಲವೂ ಮುಂಚಿನ ಹಾಗೆಯೆ. ರಾಧ ಮನೆಯಲ್ಲಿ ಸ್ವಾಗತನೀಡಿದಳು. ಅಪ್ಪನನ್ನು ಕಂಡು ಶಂಕರ-ಶಾರದೆ ಓಡಿ ಬಂದರು. ರಾಧೆಯೇ ಕೇಳಿದಳು :

"ಅಕ್ಕ ಬರಲಿಲ್ಲವೆ ?"

"ಇಲ್ಲ. ಅಲ್ಲೇ ಇದ್ದಳು."

"ಅವರಿಗೆ ಹೇಗಿದೆ ?"

ಶ್ರೀನಿವಾಸಯ್ಯನ ಕಣ್ಣುಗಳು ನೀರು ತುಂಬಿ ಕಂಠ ಗದ್ಗತವಾಯಿತು.

"ಇಲ್ಲ ರಾಧಾ ! ಅತ್ತೆ ಹೋ......ಗಿ......ಬಿ......ಟ್ಟ......ರು."

"ಅಯ್ಯೋ ! ಹೋಗಿಬಿಟ್ಟರೆ ?"

ಮಾತು ಅಷ್ಟಕ್ಕೆ ನಿಂತುಹೋಯಿತು. ಮುಂದೆ ಧ್ವನಿ ಏಳಲಿಲ್ಲ.

ಹೀಗೆ ವಾರಗಳು ಕಳೆಯಿತು. ತಂದೆಯನ್ನು ಒಂಟಿ ಬಿಟ್ಟುಬರಲು ಸಾವಿತ್ರಿಗೆ ಮನಸ್ಸು ಒಪ್ಪಲಿಲ್ಲ. ಶ್ರೀನಿವಾಸಯ್ಯ ಕಾದು ನೋಡಿದನು. ಹೆಂಡತಿಯ ಸುಳಿವಿಲ್ಲ. ಮಕ್ಕಳು ಮೊದಲಿನಂತೆ ಸ್ಕೂಲಿಗೆ ಹೋಗಿ ಬರುತ್ತಿದ್ದರು. ಸಾಯಂಕಾಲ, ಬೆಳಿಗ್ಗೆ ಮತ್ತು ರಾತ್ರಿ, ಊಟ-ಉಪಚಾರ-ಸೇವೆಗಳನ್ನೆಲ್ಲಾ ರಾಧ ಮಾಡುತ್ತಿದ್ದಳು. ರಾಧಳದೇ ಒಂದು ವೈಶಿಷ್ಟ್ಯ. ರಾಧ ಅವನ ಮುಂದೆ ಸುಳಿದ ಹಾಗೆಲ್ಲಾ ಏನೋ ಒಂದು ತರಹೆಯ ಆತ್ಮೀಯತೆ ಬರುತಿತ್ತು. ಅವಳು ಅವನೊಡನೆ ಮಾತನಾಡುತ್ತಿದ್ದ ರೀತಿ, ನಡೆಯುತ್ತಿದ್ದ ಠೀವಿ ಎಲ್ಲವೂ ಕಣ್ಣಿಗೆ ಕಟ್ಟಿದಂತಿತ್ತು. ಮನೆಯಲ್ಲಿ ಸಾವಿತ್ರಿ ಬೇರೆ ಇಲ್ಲ. ರಾಧ ಇಪ್ಪತ್ತು-ಇಪ್ಪತ್ತೆರಡು ವರ್ಷದ ಯುವತಿ. ತಂದೆ ತಾಯಿಗಳಿಲ್ಲದ ತಬ್ಬಲಿ. ತನ್ನ ಆಶ್ರಯದಲ್ಲಿರುವ ಅಬಲೆ. ಅವಳ ಮುಖ, ನೀಳವಾದ ಮೂಗು, ಪುಟ್ಟದಾದ ಬಾಯಿ ಅವನನ್ನು ಆಕರ್ಷಿಸತೊಡಗಿತ್ತು. ಆ ವದನದಿಂದ ಮಂದಹಾಸದ ಕಿರುನಗೆ ಬೀರಿದರೆ ಸಪ್ತಮ ಲೋಕದಲ್ಲಿ ವಿಹರಿಸಿದಂತಾಗುತಿತ್ತು ಅವನಿಗೆ.

ಅವಳು ತನ್ನವಳಾಗಿದ್ದರೆ ನಾನೆಷ್ಟು ಪುಣ್ಯ ಮಾಡಿದ್ದೆ! ಈಗ ಆದದ್ದಾದರೂ ಏನು? ಈಗಲೂ ನನ್ನವಳಾಗಲಾರಳೇನು? ಆದರೆ ನಾನಷ್ಟು ಅದೃಷ್ಟಶಾಲಿಯೆ ಎಂದುಕೊಳ್ಳುತ್ತಿದ್ದನು.

ಈಗೀಗ ಶ್ರೀನಿವಾಸಯ್ಯ ಸಾಯಂಕಾಲದಲ್ಲಿ ಮನೆಯಲ್ಲಿಯೇ ಇರುತ್ತಿದ್ದ. ಏನಾದರೊಂದು ಮಾತು ನಡೆಯುತಿತ್ತು. ದಿನದಿನಕ್ಕೆ ರಾಧ ಶ್ರೀನಿವಾಸಯ್ಯನ ಹೃದಯದಲ್ಲಿ ಒಂದೊಂದು ಮೆಟ್ಟಲು ಹತ್ತುತ್ತಿದ್ದಳು. ಅವನ ಪ್ರಯತ್ನವು ಫಲಿಸುವ ದಿನವೂ ಬರಲಾರಂಭಿಸಿತು.

ಅಂದು ಭಾನುವಾರ. ಶಂಕರ ಮತ್ತು ಶಾರದೆ ತಂದೆಯನ್ನು ಸಿನಿಮಾಕ್ಕೆ ಹೋಗೋಣ ಎಂದು ಕೇಳಿದ್ದರು. ಎಷ್ಟೋ ದಿವಸ ಆಗಿತ್ತು ಹೋಗಿ. ಅವನೂ ಒಪ್ಪಿಗೆ ಕೊಟ್ಟನು. ರಾಧೆಯನ್ನೂ ಬರಲು ಕೇಳಿದ. ಮೊದಲು ಅವಳೇನೂ ಹೇಳಲು ತೋರಲಿಲ್ಲ. ಅಂತೂ ಸಮ್ಮತಿ ಕೊಟ್ಟಳು. ಶಂಕರ, ಶಶಿಧರ, ಶಾರದೆ ಮತ್ತು ರಾಧೆಯನ್ನು ಕರೆದುಕೊಂಡು ಹೊರಟ ಶ್ರೀನಿವಾಸಯ್ಯ. ಪಕ್ಕದಲ್ಲೇ ಮಕ್ಕಳನ್ನು ಕುಳ್ಳಿರಿಸಿ ರಾಧೆಯೊಡನೆ ಕುಳಿತ. ಚಿತ್ರ ಪ್ರಾರಂಭವಾಯಿತು. ಅವನ ಮನಸ್ಸು ಯಾವುದೋ ಎಟುಕಲಾರದ ಹಣ್ಣನ್ನು ನಿಲುಕುಸುವುದರಲ್ಲಿತ್ತು. ರಾಧೆ ಪಕ್ಕದಲ್ಲಿ ಕುಳಿತಿದ್ದಳು. ಮೂರು ಘಂಟೆ ಹೇಗೋ ಅಂತೂ ಕಳೆಯಿತು. ಮನೆಗೆ ಬಂದು ಊಟ ಮುಗಿಸಿ ಹಾಸಿಗೆಯ ಬಳಿ ಕುಳಿತನು. ರಾಧ ಅಡುಗೆ ಮನೆ ಶುಭ್ರಮಾಡಿ ಮಲಗಲು ತನ್ನ ರೂಮಿನೆಡೆಗೆ ಬಂದಳು. ಶ್ರೀನಿವಾಸಯ್ಯ ಕುಳಿತೇ ಇದ್ದನು. ಹೋಗುವ ಮುನ್ನ ರಾಧ ಒಂದು ಬಾರಿ ಅವನ ಕಡೆಗೆ ನೋಡಿದಳು. ದಿಗ್ಭ್ರಮೆಯಾಯಿತು. ಅವನ ನೆಟ್ಟ ನೋಟ ನೋಟವನ್ನು ಎದುರಿಸಲಾರದೆ ಹೋದಳು. ಆ ನೋಟದಲ್ಲಿ ಕರುಣೆ ತುಂಬಿತ್ತು. ಆಶೆಯ ಸುಳಿವಿತ್ತು. ದೈನ್ಯದ ನೋಟವಿತ್ತು. ರಾಧ ಕೂಡಲೆ ತಲೆ ತಗ್ಗಿಸಿದಳು. ಆ ನೋಟ ಹತ್ತಿರಕ್ಕೆ ಕರೆಯುತ್ತಿದ್ದ ಹಾಗಿತ್ತು. ಬವಳಿ ಬಂದಂತಾಗಿ ರೂಮಿನಡೆ ನಡೆದುಬಿಟ್ಟಳು. ಬಂದವಳೇ ಹಾಸಿಗೆಯ ಮೇಲೆ ಬಿದ್ದುಬಿಟ್ಟಳು. ಹಾಗೆ ಉರುಳಿ ಏನೋ ಯೋಚಿಸಲಾರಂಭಿಸಿದಳು. "ಯಾತಕ್ಕಾಗಿ ಅವರು ಹಾಗೆ ನೋಡಿದರು? ಆ ದೃಷ್ಟಿಯ ಮೂಲವೇನಿರಬಹುದು? ಅಥವಾ ಅದಕ್ಕೇನಾದರೂ...... ಛೆ! ಹಾಗಿರಲಾರದು. ಕೈ ಹಿಡಿದ ಹೆಂಡತಿಗೆ ದ್ರೋಹ ಬಗೆಯುವರೆ?

ಖಂಡಿತ ಇಲ್ಲ. ಅಲ್ಲನೇ ಅಲ್ಲ." ಮತ್ತೆ ಸುಮ್ಮನೆ ಆಗುವಳು. ಆ ನೋಟ ಮತ್ತೆ ಮತ್ತೆ ಅವಳಿಗೆ ಕಾಣಿಸಿದಂತೆ ಆಗುತಿತ್ತು. ನೆನೆದಂತೆಲ್ಲಾ ಅವಳ ದೇಹ ಕಂಪಿಸುತಿತ್ತು.

ಅದೇ ವಿಚಾರದಲ್ಲಿ ತೂಗಿ-ತೂಕಿ ಒಂಬು ಘಂಟೆ ಕಳೆದಿರಬಹುದು. ದೂರದಲ್ಲಿನ ಗಡಿಯಾರವಲ್ಲಿ ಹನ್ನೊಂದು ಘಂಟೆ ಹೊಡೆಯಿತು. ಮೆಲ್ಲಗೆ ಕೊಠಡಿಯ ಬಾಗಿಲು 'ಕುಯ್' ಗುಟ್ಟಿತು. ರಾಧಳ ಹೃದಯ ಬಡಿಯ ಲಾರಂಭಿಸಿತು. ಅವಳ ಚಂಚಲತುಂಬಿದ ಕಣ್ಣುಗಳು ತಿರುಗಲಾರಂಭ ವಾಯಿತು. "ಅವರೇನಾದರೂ ಬಂದರೆ?" ಕೊಠಡಿಯ ಬಾಗಿಲೆಡೆ ನೋಡಿ ದಳು. ಅರ್ಧ ತೆರೆದಿದ್ದ ಬಾಗಿಲು ಪೂರಾ ತೆಗೆಯಿತು. ಒಳಗೆ ಬಂದವನು ಶ್ರೀನಿ ವಾಸಯ್ಯ. ಮೆಲ್ಲಗೆ ಒಂದೊಂದು ಹೆಜ್ಜೆಯನ್ನಿಡುತ್ತಾ ಮುಂದೆ ಮುಂದೆ ಬರುತ್ತಿದ್ದ. ಅವಳ ಹೃದಯದಲ್ಲಿ ಜಾಗಟೆಯಂತೆ ಬಡಿಯಲಾರಂಭಿಸಿತು. ಅವಳ ವಕ್ಷಸ್ಥಳದಲ್ಲಿ ಏರಿಳಿತ ಜಾಸ್ತಿಯಾಯಿತು. ಹಣೆಯಲ್ಲೆಲ್ಲಾ ಬೆವರು ತುಂಬಿತು. ಹಿಂದಿಂದೆ ಹೆಜ್ಜೆ ಇಡಲಾರಂಭಿಸಿದಳು. ಅವಳ ಮುಖ ದೈನ್ಯತೆ ಸೂಚಿಸುತಿತ್ತು-ಅಭಯ ಬೇಡುತಿತ್ತು. ಬಂದೇಬಿಟ್ಟ ಹತ್ತಿರ. ಕೂಗಲು ಬಾಯಿ ತೆರೆದಳು. ಆದರೆ ಸೊಲ್ಲೇ ಹೊರಗೆ ಬರಲೊಲ್ಲದು. ಹಿಂದಿಂದೆ ಬರುತ್ತಾ-ಬರುತ್ತಾ ಮಂಚದ ಮೇಲೆ ಬಿದ್ದುಬಿಟ್ಟಳು. ಮುಂದೆ ಬಂದ ಶ್ರೀನಿವಾಸಯ್ಯ ಆಯ ತಪ್ಪಿ ಅವಳ ಮೇಲೆ ಉರುಳಿದನು. ಕೈ ಅಡ್ಡ ಹಿಡಿದು ಹೇಳಿದಳು 'ಬೇಡ' ಎಂದು.

ರಾಧ ಅಬಲೆ. ಬೇಡನ ಬಲೆಗೆ ಸಿಕ್ಕಿಬಿದ್ದ ಎಳೆಯ ಜಿಂಕೆಯ ಮರಿ ಯಂತಾದಳು. ಹಿಂದೆ ಮುಂದೆ ನೋಡದೆ ಶ್ರೀನಿವಾಸಯ್ಯ ಕಾಳಸರ್ಪ ಹುದುಗಿದ್ದ ಹುತ್ತದಲ್ಲಿ ಕೈ ಯಿಡುವಂತೆ ಮುನ್ನುಗಿದ್ದ.

ಅಂತೂ ಬೆಳಗಾಯಿತು. ರಾಧ ಹಾಸಿಗೆಯ ಮೇಲೆ ಮಲಗಿ ದಿಂಬಿಗೆ ಮುಖವಿಟ್ಟು ಅಳುತ್ತಿದ್ದಳು.

ಶ್ರೀನಿವಾಸಯ್ಯ ಎದ್ದವನೇ ಅವಳ ಬಳಿ ಬಂದನು. ಅವಳು ಮುಖವನ್ನು ತಿರುಗಿಸಲಿಲ್ಲ. ತಿರುವಿ ನೋಡಲಿಲ್ಲ. ಕೆಲಸಕ್ಕಾಗಿ ಹೊರಟುಬಿಟ್ಟ ಹೊರಗೆ.

ಮತ್ತೆ ಸಾಯಂಕಾಲ ಬಂತು. ಶ್ರೀನಿವಾಸಯ್ಯ ಮರಳಿ ಬಂದನು.

ರಾಧ ಅಳುತ್ತಲೇ ಇದ್ದಳು. ಶ್ರೀನಿವಾಸಯ್ಯ ಅವಳ ತಲೆಯ ಮೇಲೆ ಕೈ ಇಟ್ಟು ಸಮಾಧಾನ ಮಾಡಲಾರಂಭಿಸಿದನು.

"ಏಳು ರಾಧ! ಆಗಿದ್ದು ಆಗಿಹೋಯಿತು. ನಿನ್ನ ಕೈ ಬಿಡಲ್ಲ ನಾನು."

ಕೆಂಡದಂತಿದ್ದ ಕಣ್ಣುಗಳನ್ನು ತಿರುಗಿಸಿ ಅವಳು ಹೇಳಿದಳು. "ಕೈ ಹಿಡಿದ ಹೆಂಡತಿಗೆ ದ್ರೋಹ ಮಾಡಬಹುದಾ?"

"ಹಾಗಲ್ಲ ರಾಧ"

"ನೋಡಿ, ಸಾವಿತ್ರಿಯನ್ನು ನಾನು ಅಕ್ಕ ಎಂದುಕೊಂಡಿದ್ದೆ. ಅವಳ ಆಶ್ರಯಲ್ಲಿ ಈಗ ನಾನು ಬದುಕಿರುವುದು. ಅಂತಹುದರಲ್ಲಿ ಉಪ್ಪು ತಿಂದ ಮನೆಗೆ ಎರಡು ಬಗೆಯಬಹುದೇ? ಅವಳೇನಾದರೂ ತಿಳಿದರೆ ನನ್ನ ಸ್ಥಾನವೆಲ್ಲಿ? ನಾನು ಮೋಸಮಾಡಿದಂತಾಯಿತಲ್ಲಾ!"

"ಹೋಗಲಿ ರಾಧಾ! ಈವಾಗ ಏನಾಗಿದೆ ಹೇಳು. ನಿನಗೆ ಬೇಕಾಗಿದ್ದು ಎಲ್ಲಾ ತಂದುಕೊಡುತ್ತೇನೆ. ನೀನು ನನ್ನವಳಾದರೆ ಸಾಕು!"

"ಹಾಗೆಂದು ಸಾವಿತ್ರಿಯನ್ನು ಏನು ಮಾಡುತ್ತೀರಿ?"

"ಅವಳಿಗೇನು ಮಾಡೋದು? ಅವಳೂ ಇದ್ದುಕೊಂಡು ಹೋಗಲಿ. ಅವಳಿಗೆ ತಿಳಿಸುವುದು ಬೇಡ."

ಯಾವುದೋ ಅಸಾಧಾರಣ ಭೂತ ರಾಧಳ ಮನಸ್ಸಿನಲ್ಲಿ ಹೊಕ್ಕಿತು. ಇಂಥಹ ಸಮಯ ಕಳೆದುಕೊಳ್ಳಬಾರದು ಎಂದುಕೊಂಡಳು. ಅಂತೂ ಮತ್ತೆ ರಾಧಳ ಮುಖದಲ್ಲಿ ನಗೆ ಲಾಲಸವಾಡಿತು.

## ೧೧

ಅಂದಿನಿಂದ ರಾಧ ಮನೆಯೊಡತಿ. ಶ್ರೀನಿವಾಸಯ್ಯನಿಗೆ ಯಾವಾಗಲೂ ಅವಳ ಚಿಂತೆ. ಆಫೀಸಿನಲ್ಲಿ ಕುಳಿತಿರುವಾಗಲೂ, ಸ್ನೇಹಿತರೊಂದಿಗೆ ಮಾತನಾಡುವಾಗಲೂ, ಹೊರಗೆ ಇರುವಾಗಲೂ ರಾಧಳೇ ಅವನ ಮನಸ್ಸಿನಲ್ಲಿ

ತಾಂಡವವಾಡುತ್ತಿದ್ದಳು. ಅವಳ ಸೌಂದರ್ಯವನ್ನು ಸಾವಿತ್ರಿಯೊಡನೆ ಹೋಲಿಸಿದರೆ ರಾಧೆಯದೇ ಮಿಗಿಲು. ಅವೇನೋ ತೃಪ್ತಿ. ಅದೇನೋ ಸಂತೋಷ. ಯಾವಾಗಲೂ 'ರಾಧ'....'ರಾಧ'....ಎಂದೇ ಕನವರಿಸಿ ಕೊಳ್ಳುತ್ತಿದ್ದನು. ದಿನವೂ ಅವಳದೇ ಯೋಚನೆ. ಪ್ರತಿ ರಾತ್ರಿಯೂ ಅಷ್ಟೇಕೆ ಪ್ರತಿ ಕ್ಷಣವೂ ಅವಳ ಸಾನಿಧ್ಯದಲ್ಲೇ ಇರುತ್ತಿದ್ದ. ಇದುವರೆಗೆ ಯಾವುದೋ ಕಾಣದಿದ್ದ ತೃಪ್ತಿ, ಸಂತೋಷ ಸಮಾಧಾನ ರಾಧೆಯಲ್ಲಿ ಕಾಣುತ್ತಿದ್ದನು. ರಾಧಳೂ ಅಷ್ಟೇ ನಗುಮೊಗದಿಂದ ಶ್ರೀನಿವಾಸಯ್ಯನನ್ನು ಸ್ವಾಗತಿಸುತ್ತಿದ್ದಳು. ಮನೆಗೆಲಸವನ್ನು ಅಚ್ಚುಕಟ್ಟಾಗಿ ಮಾಡಿಕೊಂಡು ಹೋಗುತ್ತಿದ್ದಳು. ಅವಳ ಮೇಲೆ ಶ್ರೀನಿವಾಸಯ್ಯನಿಗೆ ಸಾವಿತ್ರಿಗಿಂತ ಹೆಚ್ಚಿನ ಪ್ರೇಮವು ಉದ್ಭವಿಸಿತ್ತು. ಇವೊಂದೂ ಮಕ್ಕಳ ಕಣ್ಣಿಗೆ ಕಾಣಿಸದಂತೆ ಇತ್ತು.

ಒಂದು ತಿಂಗಳು ಕಳೆದು ಹೋಯಿತು. ಊರಿನಲ್ಲಿದ್ದ ಸಾವಿತ್ರಿಗೆ ಯಾವಾಗಲೂ ಗಂಡನ ನೆನಪೇ ಮರುಕಳಿಸುತ್ತಿತ್ತು. ಎಷ್ಟು ದಿವಸಗಳಾಗಿ ಹೋಯಿತು ಅವರನ್ನು ನೋಡಿ–ಮಕ್ಕಳನ್ನು ನೋಡಿ! ಅವರೆಷ್ಟು ಕಂದಿ ಹೋಗಿದ್ದಾರೋ–ಅವರಿಗೆಷ್ಟು ಬೇಸರವಾಗಿದೆಯೋ, ರಾಧ ಹೊತ್ತಿಗೊತ್ತಿಗೆ ಸರಿಯಾಗಿ ಅಡುಗೆ ಮಾಡಿ ಬಡಿಸುತ್ತಿದ್ದಾಳೋ ಇಲ್ಲವೊ....! ಸಾವಿತ್ರಿ ಯೋಚಿಸಿ ಬೆಂದಳು. ಒಬ್ಬರೇ ತಂದೆಯನ್ನು ಬಿಟ್ಟು ಹೋಗುವುದೇ?– ಒಂದುಕಡೆ. ಗಂಡನ ಬಳಿ ಹೋಗುವುದೇ–ಎಂದು ಮತ್ತೊಂದು ಕಡೆ. ಹೇಗೋ ದಿನ ಕಳೆಯುತ್ತಿತ್ತು. ಇರಳು ಪ್ರಭಾತವಾಗುತ್ತಿತ್ತು–ಪ್ರಭಾತ ಇರುಳಾಗುತ್ತಿತ್ತು.

ಒಂದು ರಾತ್ರಿ ಸಾವಿತ್ರಿಗೆ ಕನಸಾಯಿತು. ಹಳ್ಳಿಯ ಹೆಣ್ಣು–ಮುಗ್ಧ ಮನಕ್ಕೆ ಅತೀವ ವೇದನೆಯಾಯಿತು.

ಒಂದು ದೊಡ್ಡ ಅರಣ್ಯದಲ್ಲಿ ಅವರ ಪುಟ್ಟ ಸಂಸಾರವಿದ್ದಹಾಗೆ. ಒಂದು ಸಾಯಂಕಾಲ ಗುಡಿಸಲ ಹೊರಗೆ ಸಾವಿತ್ರಿಯು ಅವಳ ಗಂಡ ಶ್ರೀನಿವಾಸಯ್ಯನ ಎದೆಯ ಮೇಲೆ ಒರಗಿ ಕುಳಿತು ಸುತ್ತಲ ವನದ ಶೃಂಗಾರವನ್ನು ಕಂಡು ಆನಂದಿಸುತ್ತಿದ್ದಹಾಗೆ. ಶ್ರೀನಿವಾಸಯ್ಯ ಸುತ್ತಲ ಪ್ರಕೃತಿಯ ಸೌಂದರ್ಯ ವನ್ನು ಬಣ್ಣಿಸುತ್ತಿದ್ದಹಾಗೆ. ಸುತ್ತಲೂ ದೊಡ್ಡ ದೊಡ್ಡ ಅರಳಿ ಮರಗಳು

ಪಕ್ಕದಲ್ಲಿ ಸಣ್ಣ ಸಣ್ಣ ಬಳ್ಳಿಗಳು ಹೊರಲಾರದ ಕಾಯಿ ಹಣ್ಣುಗಳನ್ನು ಹೊತ್ತು ಗಾಳಿಗೆ ಅಲುಗಾಡುತ್ತಾ ದೊಡ್ಡ ಮರಗಳನ್ನು ನಾಚಿಕೆಯಿಂದ ಬಳುಕುತ್ತಾ ಚುಂಬಿಸುತ್ತಿದ್ದುವು. ಮನೆಯ ಮುಂದೆ ಸಣ್ಣ ಕೊಳ. ಕೊಳದಲ್ಲಿ ಕೆಲವು ಜೀವಂತ ಹಂಸಗಳು ತೇಲುತ್ತಿದ್ದುವು. ಅದರಲ್ಲಿ ಬೆಳೆದ ಕೆಲವು ಪುಷ್ಪಗಳು ಸುವಾಸನೆಯನ್ನು ಬೀರುತ್ತಾ ಆಕರ್ಷಣೆಗೆ ತೊಡಗಿತ್ತು. ಪಡವಣ ದಿಕ್ಕಿನಲ್ಲಿ ಮುಳುಗುತ್ತಿದ್ದ ಸೂರ್ಯನು ತನ್ನ ಶೇಷಬಿಂದುವಾದ ರಕ್ತ ವರ್ಣ ಕಿರಣಗಳನ್ನು ಹೊರದೂಡಿ ಜಗತ್ತಿನಲ್ಲಿ ವ್ಯಾಪಿಸುತ್ತಲಿದ್ದನು. ತಂಗಾಳಿ ಮೋಹಕವಾಗಿ ಬೀರುತ್ತಾ ಮನಸ್ಸಿಗೆ ಹರ್ಷವನ್ನೂ ದೇಹಕ್ಕೆ ಮೃದು ಸ್ಪರ್ಶದ ಆನಂದವನ್ನೂ ತರುತ್ತಲಿತ್ತು.

ಅಷ್ಟರಲ್ಲಿ ಗಗನದಲ್ಲಿ ಇದ್ದಕ್ಕಿದ್ದಹಾಗೆಯೇ ಯಾವುದೋ ಎದೆಯೊಡೆ ಯುವ ಸಿಡಿಲಿನಂಥಹ ಶಬ್ದವು ಕೇಳಿಬಂತು. ಪ್ರೇಮಾಲಾಪನೆಯ ಜಗತ್ತಿ ನಲ್ಲಿ ತೇಲಿ ಮುಳುಗಿ ವಿಹರಿಸುತ್ತಲಿದ್ದ ಸಾವಿತ್ರಿ–ಶ್ರೀನಿವಾಸಯ್ಯ ಈರ್ವರೂ ಚಕಿತರಾಗಿ, ಭೀತರಾಗಿ ಅಚ್ಚರಿಯಿಂದ ತಮ್ಮ ಶಿರಗಳನ್ನೆತ್ತಿ ನೋಡುತ್ತಿದ್ದ ಹಾಗೆಯೇ ಆಕಾಶದಿಂದ ಯಾವುದೋ ದೀಪವು ತಮ್ಮ ಬಳಿಗೆ ಬಂದ ಹಾಗಾಯಿತು. ದೂರದೂರದಲ್ಲಿ ಬರುತ್ತಿದ್ದ ಪ್ರಕಾಶವನ್ನು ಬೀರುತ್ತ ಆ ದೀಪವು ಸಮೀಪಗತವಾದೊಡನೆ ಇದ್ದಕ್ಕಿದ್ದ ಹಾಗೆಯೇ ಆ ದೀಪವು ಒಬ್ಬಳು ಸುಂದರ ಯುವತಿಯಂತೆ ಮಾರ್ಪಟ್ಟಿತು. ಅವಳ ಉಡುಗೆ ತೊಡುಗೆ ಗಳೆಲ್ಲವೂ ಹೂವಿನಂತೆಯೇ ಕಂಡು ಬೆಳ್ಳನೆಯ ಬಟ್ಟೆಯಂತೆ ಕಾಣುತ್ತಿತ್ತು. ಅವಳ ಕೆಂಪನೆಯ ಚೆಂದುಟಿಯಿಂದ ನಗೆ ಮಿಂಚು ಪ್ರಕಾಶಿಸುತ್ತಿತ್ತು. ಅವಳ ತುರುಬಿನಲ್ಲಿ ನಕ್ಷತ್ರದಂತಹ ಕುಸುಮವನ್ನು ಮುಡಿದಿದ್ದಳು.

ಅವರೀರ್ವರೂ ಕುಳಿತಿದ್ದ ತಾಣದಿಂದ ಅರ್ಧ ಮಾರು ದೂರದಲ್ಲಿ ಅವಳು ಭೂಮಿಗಿಳಿದು ಅವರ ಬಳಿಗೆ ಬಂದಳು. ಮುಂದೆ ಬಂದು ನಿಂತು ಒಂದು ಬಾರಿ ಮುಗುಳ್ನಗೆ ಬೀರಿ ತನ್ನ ಮರದ ಕೊಂಬೆಯಂತಹ ಬಿಳಿಯ ಕೈಯನ್ನು ನೀಡಿದಳು. ಒಂದು ಬಾರಿ ಶ್ರೀನಿವಾಸಯ್ಯ ಸಾವಿತ್ರಿಯ ಮುಖ ವನ್ನು ನೋಡಿದನು. ಈರ್ವರೂ ತಕ್ಷಣ ಎದ್ದು ನಿಂತರು. ಮತ್ತೊಮ್ಮೆ ಆ ಅಪ್ಸರ ಕನ್ನಿಕೆಯು ಮುಂದೆ ಬಂದು ಶ್ರೀನಿವಾಸಯ್ಯನ ಕರಗಳನ್ನು ಹಿಡಿದು

ನಡೆದೇ ಬಿಟ್ಟಳು. ಸಾವಿತ್ರಿಯು ಅವರನ್ನು ತಡೆಯಲು ಯತ್ನಿಸಿ ಕೈ ನೀಡಿದಳು. ಆದರೆ ಅಷ್ಟರಲ್ಲಿಯೇ ಆ ಅಪ್ಸರ ಕನ್ಯೆಯು ತನ್ನ ಶ್ರೀನಿವಾಸಯ್ಯನನ್ನು ಹಿಡಿದುಕೊಂಡು ಮತ್ತೊಮ್ಮೆ ಆಕಾಶದ ಕಡೆಗೆ ಹೊರಟುಬಿಟ್ಟಳು. ದಿಕ್ಕು ತೋಚದೆ ಸಾವಿತ್ರಿ ಕಿರುಚಿಕೊಂಡಳು. "ಸ್ವಾಮೀ!......ಸ್ವಾಮೀ!!.... ಸ್ವಾಮೀ!!!" ಆದರೆ ಅಷ್ಟರಲ್ಲಿ ತನ್ನ ಗಂಡ ಹೊರಟುಹೋಗಿದ್ದನು.

ಸಾವಿತ್ರಿಯು ಕಿರುಚಿಕೊಂಡಿದುದನ್ನು ಕಂಡು ಮಗಳು ಕನವರಿಸುತ್ತಿದ್ದಾಳೆಂದು ತಿಳಿದು ರಾಮಸ್ವಾಮಿಗಳು ಓಡಿಬಂದು ಅವಳನ್ನು ಎಬ್ಬಿಸಿದರು.

ಸಾವಿತ್ರಿ ಕಣ್ಣು ಬಿಟ್ಟು ಕೇಳಿದಳು,

"ಅವರೆಲ್ಲಿ? ಅವರೆಲ್ಲಿ?"

"ಯಾರೆ? ಹುಚ್ಚಿ. ಅವರೆಲ್ಲಿ ಇಲ್ಲಿದ್ದಾರೆ ಊರಿನಲ್ಲಿದ್ದಾರೆ! ನಿನಗೆ ಯಾವಾಗಲೂ ಅದೇ ಕಳವಳ" ಎಂದು ಹೇಳಿದರು.

ಅದುವರೆಗೆ ಕಂಡುದು ಕೇವಲ ಕನಸು ಎಂದು ತಿಳಿದುಕೊಂಡಳು. "ಹಾಗೇಕಾಯಿತು ಕನಸು? ಎಂತಹ ಕೆಟ್ಟ ಕನಸು. ಅವರಿಗಲ್ಲಿ ಏನಾಗಿರಬಹುದೊ? ಯಾವಳಾದರೂ........ಥೂ ಎಂಥಹ ಯೋಚನೆ. ಅವರು ನನ್ನ ದೇವರು ಅಂತಹ ಕೆಲಸ ಖಂಡಿತ ಮಾಡುವುದಿಲ್ಲ. ಇವೆಲ್ಲವೂ ನನ್ನ ಭ್ರಮೆಯೇ ಹೊರತು ಬೇರೆಯಲ್ಲ. ಅವರನ್ನು ನೋಡಿ ಎಷ್ಟು ದಿವಸಗಳು ಸಂದಿಹೋಯಿತು. ಹೋಗಲಿ ಅಲ್ಲಿಗೆ ಹೋಗಿ ಬರೋಣವೆ? ಹೌದು!"

ಮಗಳ ಮುಖ ಚಿಂತಾಕ್ರಾಂತವಾಗಿದ್ದುದನ್ನು ಕಂಡು ಕೇಳಿದರು. ರಾಮಸ್ವಾಮಿಗಳು,

"ಯಾಕೆ ಮಗೂ, ಮುಖ ಸಪ್ಪೆಯಾಗಿದೆ?"

"ಯಾಕೂ ಇಲ್ಲ ಅಪ್ಪ!"

"ನನಗೆ ಗೊತ್ತು ಮಗೂ, ನಿನಗೆ ಮನಸ್ಸಿನಲ್ಲಿ ಏನು ಕದನ ನಡೆಯುತ್ತಿದೆ ಅಂತ. ಗಂಡನ ಮನೆ ಚಿಂತೆ ಇರಬಹುದು ಅಲ್ಲವೆ?"

ಸಾವಿತ್ರಿ ಮುಗುಳ್ನಕ್ಕಳು.

"ಹೌದು, ನನಗೆ ಗೊತ್ತಿಲ್ಲವೆ? ನೀನು ಅಲ್ಲಿಗೆ ಹೋಗಿ ಬರಬಾರದೇ ಸಾತೂ. ಎಷ್ಟು ದಿವಸಗಳಾಗಿ ಹೋಯ್ತು ಅಲ್ಲಿಗೆ ಹೋಗದೆ ಇಲ್ಲಿ ನಿಂತು. ಪಾಪ ಅವರು ಎಷ್ಟು ನೊಂದುಕೊಂಡಿದ್ದಾರೋ ಏನೋ"

"ಅಯ್ಯೋ ಬಿಡೀಪ್ಪ. ನಿಧಾನವಾಗಿ ಹೋದರೆ ಆಯಿತು."

"ಹಾಗನ್ನಬಾರದಮ್ಮ. ನೀನು ಸಂಸಾರವಂದಿಗಳು. ನಿನ್ನ ಪಾಲಿಗೆ ದೇವರು ಎರಡು ಮಕ್ಕಳನ್ನೂ ಕೊಟ್ಟಿದ್ದಾನೆ. ಅವುಗಳ ಜವಾಬ್ದಾರಿ ನಿನ್ನದು."

"ನಾನು ಅಲ್ಲಿಗೆ ಹೋದರೆ ಇಲ್ಲಿ?"

"ಏನು ಇಲ್ಲಿ? ನೀನು ನಿಶ್ಚಿಂತೆಯಾಗಿ ಹೋಗಿಬಾಮ್ಮ."

"ನೀನು ಇಲ್ಲಿ ಒಂಟಿಯಾಗಿ ಬಾಳುವುದಕ್ಕಿಂತ ನಮ್ಮಲ್ಲಿಗೇ ಬರ ಬಾರದೆ? ಅಪ್ಪ?"

"ಅಯ್ಯೋ ನನ್ನಮ್ಮ. ಆ ಯೋಚನೆ ನಿನಗೆ ಬೇಡ. ನನಗೆ ಇಲ್ಲಿ ಸುಖವಾಗಿದೆ."

ರಾಮಸ್ವಾಮಿಗಳ ಮನಸ್ಸಿನಲ್ಲಿ "ತಾನು ಆ ಸಂಸಾರದಲ್ಲಿ ನೆಲಸಿದರೆ ಏನು ದುಃಖ ಒದಗುವುದೋ, ಅನ್ಯೋನ್ಯವಾಗಿರುವ ದಂಪತಿಗಳ ಮಧ್ಯೆ ನಾನ್ಹೋಗಿ ಇದ್ದರೆ ಹೇಗೋ ಎಂಬ ಅಭಿಪ್ರಾಯ. ಅದಕ್ಕೆ ಅವರು ಒಪ್ಪಲೇ ಇಲ್ಲ.

ಸಾವಿತ್ರಿ ಬೇಡಿಕೊಂಡು ಕೇಳಿದಳು. ಉಹೂ. ರಾಮಸ್ವಾಮಿ ಗಳು ಬರಲು ಒಪ್ಪಲೇ ಇಲ್ಲ.

"ಇನ್ನು ಎರಡು ದಿವಸ ಬಿಟ್ಟುಕೊಂಡು ಬರುತ್ತೇನೆ ಎಂದು ಕಾಗದ ಬರೆದು ಹಾಕು ತಾಯೀ ನಿಮ್ಮ ಯಜಮಾನರಿಗೆ !" ಎಂದರು ತಂದೆ.

ಅದೇ ಮಧ್ಯಾಹ್ನ ತೀರ್ಮಾನಿಸಿ ಸಾವಿತ್ರಿ ಕಾಗದಬರೆಯಲು ಕುಳಿತಳು. ಹೇಗೆಂದು ಬರೆಯುವುದು? ಏನು ಬರೆಯುವುದು? ಏನೂ ಹೊಳೆಯಲಿಲ್ಲ ಅವಳ ಮನಸ್ಸಿಗೆ. ಪುಟ್ಟ ಕಾಗದವೊಂದನ್ನು ಬರೆದಳು. ಅದರ ಒಕ್ಕಣೆ ಹೀಗಿತ್ತು :

ದೈವ ಸಮಾನರಾದ ಶ್ರೀ........ಅವರ ಸಮಕ್ಷಮಕ್ಕೆ

ಸ್ವಾಮೀ,

ನನಗೆ ಇಲ್ಲಿರಲು ಮನಸ್ಸೇ ನಿಲ್ಲದಾಗಿದೆ. ಅಪ್ಪನು ಅದೇ ರೀತಿ ನನಗೆ ಹೋಗಲು ಅನುಮತಿ ಇತ್ತರು. ಆದ್ದರಿಂದ ನಾನು ನಾಡಿದ್ದು ಬೆಳಿಗ್ಗೆ ಎಂಟು ಘಂಟೆಯ ಬಸ್ಸಿನಲ್ಲಿ ಕುಳಿತು ಊರಿಗೆ ಬರುವೆನು.

ಇಂತೀ

ನಿಮ್ಮ...........
ಸಾವಿತ್ರಿ.

ಕಾಗದವನ್ನು ಬರೆದು ಸರಿಯೋ ಅಥವಾ ತಪ್ಪೋ ಎಂದು ಮತ್ತೊಮ್ಮೆ ನೋಡಿದಳು. ಹೇಗಿದ್ದರೇನು? ಅವರಿಗೆ ತಾನೇ ಬರೆಯುವುದು ಎಂದು ಕೊಂಡು ಟಪ್ಪಾಲ್ ಖಚೇರಿಗೆ ಹೋಗಿ ಹಾಕಿ ಬಂದಳು.

ಮನೆಗೆ ಬಂದ ಬಳಿಕ ರಾಮಸ್ವಾಮಿಗಳು ಸಾವಿತ್ರಿಯನ್ನು ಕೇಳಿದಳು.

"ಏನು ಮಗೂ, ಕಾಗದ ಹಾಕಿ ಬಂದೆಯಾ?"

"ಹೂ."

"ಯಾವ ದಿನ ಬರುವೆ ಎಂದು ಬರೆದೆ?"

"ನೀವೇ ಹೇಳಿದಿರಲ್ಲ. ನಾಡಿದ್ದು ಬರುವೆನು ಎಂದು ಬರೆದೆ. ನನಗೆ ಅಲ್ಲಿಗೆ ಹೋಗುವುದು ಹೇಗೆ ಅಂತ ಅಪ್ಪ?"

"ಹುಚ್ಚು ಹುಡುಗಿ, ಗಂಡನ ಮನೆಗೆ, ಅಲ್ಲ ನಿನ್ನ ಮನೆಗೆ ನೀನೇ ಹೇಗೆ ಹೋಗೋದು ಅಂತ ಯೋಚಿಸುತ್ತಿದ್ದೀಯಲ್ಲೇ. ಹೋದ ಕೂಡಲೆ ನಿನ್ನ ಆರೋಗ್ಯ ನೋಡಿಕೋಮ್ಮ. ಮಕ್ಕಳನ್ನೂ ಅವರನ್ನೂ ಚೆನ್ನಾಗಿ ನೋಡಿಕೊಳ್ಳಮ್ಮ. ಎಲ್ಲಾ ನಿನ್ನ ತಲೆಯ ಮೇಲಿದೆ. ಮಕ್ಕಳನ್ನು ಓದಿಸಿ ವಿದ್ಯಾವಂತರನ್ನಾಗಿ ಮಾಡುವುದು ನಿನ್ನ ಕರ್ತವ್ಯ. ಗಂಡ ಹೇಳಿದ ಹಾಗೆ ಕೇಳಿಕೊಂಡು ಸಾಜೋಕಾಗಿ ಸಂಸಾರ ಸಾಗಿಸಿಕೊಂಡು ಹೋಗು. ಅವರಿಗೆ

ರುದ್ಧವಾಗಿ ಎಂದೂ ನಡೆದುಕೊಳ್ಳಬೇಡ. ನಿನಗೆ ಇವೆಲ್ಲ ಹೇಳೋದು ನನಗೆ ಬುದ್ಧಿಯಿಲ್ಲ ಅಷ್ಟೆ. ಆದರೂ ಮುದುಕ ಹೇಳ್ತಾ ಇದ್ದೀನಿ."

"ಆಗಲಿ ಅಪ್ಪ. ನಿನ್ನ ಆಶೀರ್ವಾದ ಒಂದು ಇದ್ದರೆ ಸಾಕು."

"ನನ್ನ ಆಶೀರ್ವಾದ ಏನಮ್ಮ. ಮುಖ್ಯ ದೇವರು ಕಣ್ಣು ಬಿಟ್ಟು ನೋಡಬೇಕು."

ತಂದೆಯನ್ನು ಒಬ್ಬಂಟಿಗರಾಗಿ ಬಿಟ್ಟು ಹೋಗಲೇ ಬೇಡವೇ? ಎನ್ನುವ ಸಂದೇಹ ಸಾವಿತ್ರಿಗೆ. ಮತ್ತೆ ಮತ್ತೆ ಕೇಳಿ ನೋಡಿದಳು.

"ನಿನಗೆ ವಯಸ್ಸಾಗುತ್ತಾ ಬಂತು. ಇಲ್ಲಿ ಅಡುಗೆ ಉಪಚಾರಗಳನ್ನು ಮಾಡುವರಾರು ಅಪ್ಪಾ?"

"ಆ ಯೋಚನೆಗಳೆಲ್ಲಾ ಈಗೇಕಮ್ಮ. ಇಲ್ಲಿ ನನಗೇನು ಕಡಿಮೆ ಯಾಗಿದೆ ಹೇಳು. ನೀನು ನಿನ್ನ ಸಂಸಾರವನ್ನು ನೋಡಿಕೊಳ್ಳಲು ಹೊತ್ತೇ ಸಾಲದು. ನಾನು ಅಲ್ಲಿಗೆ ಆಗಾಗ ಬರುತ್ತಾ ಹೋಗುತ್ತಾ ಇರುತ್ತೀನಮ್ಮ. ವೃಥಾ ಯೋಚನೆ ಮಾಡಬೇಡ."

"ಏನಾದರೂ ಹೇಳಪ್ಪ ನೀನು. ನನಗೆ ಅಲ್ಲಿಗೆ ಹೋಗಲು ಕಾಲೇ ಬಾರದು."

"ಹಾಗಂದರೆ ಆಗುತ್ತೆಯೇನಮ್ಮ! ನಾನು ಎಷ್ಟು ದಿವಸ ಇರುತ್ತೀನಿ ಹೇಳು. ನಿನ್ನ ಮಕ್ಕಳು ನಿನ್ನನ್ನು ಬಿಟ್ಟು ಅಲ್ಲೇ ಇರುತ್ತವೆಯೇನು?"

"ಅಂತೂ ಅಲ್ಲಿಗೆ ಬರುವುದಿಲ್ಲ ಅನ್ನು"

"ಹಾಗಲ್ಲ, ಬರುತ್ತೀನಿ ಎಂದಾಪರೊಮ್ಮೆ. ಈಗ ನೀನು ನಿಶ್ಚಿಂತೆಯಾಗಿ ಹೋಗಿ ಬಾಮ್ಮ."

ಸಾವಿತ್ರಿ ಏನನ್ನೂ ಹೇಳಲಾರದೆ ಸುಮ್ಮನೆ ಕುಳಿತಳು. ಕಣ್ಣಿನಿಂದ ಉಕ್ಕುತ್ತಿದ್ದ ಅಶ್ರುವನ್ನು ಸೆರಗಿನಿಂದ ತೊಡೆಯಲೆತ್ನಿಸಿದಳು. ಪ್ರಯಾಣಕ್ಕೆ ಸಿದ್ಧ ಮಾಡಿಕೊಳ್ಳತೊಡಗಿದಳು.

ಪತ್ನಿಯಿಂದ ಬಂದ ಕಾಗದವನ್ನು ನೋಡಿ ಶ್ರೀನಿವಾಸಯ್ಯ ಅಪ್ರತಿಭ

ನಾದನು-ಮೂರ್ಖನಾದನು. ಕೇವಲ ಎರಡೇ ದಿವಸ. ಸಾವಿತ್ರಿ ಮತ್ತೆ ಮರಳಿ ಬರುವಳು. ಏನು ಮಾಡುವುದು?

ಶ್ರೀನಿವಾಸಯ್ಯ ಬಂದುದನ್ನು ಕಂಡು ರಾಧ ಹೊರಗೆ ಓಡಿ ಬಂದಳು. ಅವನ ಮುಖವನ್ನು ಒಮ್ಮೆ ನೋಡಿ ಮುಗುಳ್ನಗೆಯನ್ನು ಬೀರಿದಳು. ಅದಕ್ಕೆ ಪ್ರತ್ಯುತ್ತರವೆಂಬಂತೆ ಶ್ರೀನಿವಾಸಯ್ಯ ತನ್ನ ಕೈಯಲ್ಲಿದ್ದ ಕಾಗದವನ್ನು ರಾಧಳೆಡೆ ಒಗೆದನು.

ರಾಧ ಸಂಶಯ-ಕುತೂಹಲದಿಂದ ಕಾಗದವನ್ನು ತೆಗೆದು ಓದಿದಳು. ಅವನೆಡೆ ತಿರುಗಿ ಕೇಳಿದಳು,

"ಏಕೆ ಮೌನವಾಗಿದ್ದೀರಿ?"

"ಪತ್ರವನ್ನು ನೋಡಿದೆಯಾ?"

"ನೋಡಿದೆ. ಸಾವಿತ್ರಿ ಬರುವಳಂತೆ."

"ಬಂದರೆ..........."

"ಏನಾಯಿತು ಬಂದರೇನಂತೆ!"

"ನಾನೂ ನೀನೂ ದೂರವಾಗಿ ಅಗಲಬೇಕಲ್ಲವೆ!"

ರಾಧ ಇದನ್ನು ಯೋಚಿಸಿರಲಿಲ್ಲ. ಅವನು ಹೇಳಿದೊಡನೆ ಅವಳಿಗೆ ನಗು ಉಕ್ಕಿಬಂತು.

"ಅಂತೂ ಹೆಂಡತಿ ಮರಳಿ ಬಂದ ಮೇಲೆ ಈ ರಾಧಳನ್ನು ಮರೆತೇ ಬಿಡುವಿರೇನೊ!"

"ಆ ವಿಷಯಕ್ಕೇ ರಾಧ ನಾನು ಹೇಳಿದ್ದು. ಖಂಡಿತ ನಿನ್ನನ್ನು ಮರೆಯುವೆನೇ, ಅದು ಆಗದ ಹೋಗದ ಮಾತು. ಪ್ರಪಂಚ ನನ್ನನು ದೂರಬಗೆಯಲಿ, ಸಾವಿತ್ರಿ ನನ್ನನ್ನು ಕೈ ಬಿಡಲಿ, ಆದರೆ ಖಂಡಿತ ನಿನ್ನನ್ನು ನಾನು ಬಿಡಲಾರೆ ರಾಧಾ!"

"ಎಲ್ಲರೂ ಹಾಗೆಯೇ ಹೇಳುವುದು."

"ಏನು ಮಾಡಲಿ ರಾಧಾ, ನಾನು ಈಗ?"

"ಏನು ಮಾಡಬೇಕೊಂತೀರಿ ಹಾಗಾದರೆ?"

"ನನಗೇನೂ ತೋರುವುದಿಲ್ಲ ರಾಧಾ."

"ಏನೂ ಮಾಡಬೇಡಿ ನೀವು. ಸುಮ್ಮನಿದ್ದುಬಿಡಿ. ದೇವರು ಮಾಡಿದ ಹಾಗಾಗುತ್ತದೆ."

ಅವಳ ಧೈರ್ಯವನ್ನು ನೋಡಿ ಶ್ರೀನಿವಾಸಯ್ಯ ತೆಪ್ಪಗಾದನು.

ಮಾರನೆಯ ದಿವಸ ರಾಧ ಕೇಳಿದಳು,

"ಏನ್ರೀ, ಇವತ್ತು ಸಿನಿಮಾಕ್ಕೆ ಹೋಗೋಣವೇ, ನಿಮ್ಮ ಜೊತೆ ಮತ್ತೆಂದೂ ಬರಲಾಗುವುದಿಲ್ಲ"

"ಅಲ್ಲಿ ಹೋಗಿ ಮೂರು-ನಾಲ್ಕು ಘಂಟೆ ಯಾಕೆ ಸುಮ್ಮನೆ ಕಾಲ ಕಳೆಯಬೇಕು. ಇಲ್ಲೇ ನಾವಿಬ್ಬರೂ ಇರೋಣ."

"ಬೇಡಾರೀ. ಮೆಜೆಸ್ಟಿಕ್‌ನಲ್ಲಿ 'ಅನಾರ್ಕಲಿ' ಚಿತ್ರ ನಡೆಯುತ್ತಿದೆ ಯಂತೆ. ಚೆನ್ನಾಗಿರಬಹುದು. ಹೋಗೋಣ."

ಸಾಯಂಕಾಲ ಐದು ಘಂಟೆಗೆ ಮಕ್ಕಳನ್ನೂ ಕರೆದುಕೊಂಡು 'ಅನಾ ರ್ಕಲಿ' ಚಿತ್ರವನ್ನು ನೋಡಲು ಹೊರಟರು.

ಚಿತ್ರ ಪ್ರಾರಂಭವಾಯಿತು.

ತೋಟದಲ್ಲಿ ಅನಾರ್ಕಲಿ, ಸಲೀಮ ಪ್ರಿಯನೊಂದಿಗೆ ಪ್ರೇಮಾಲಾಪನದ ದೃಶ್ಯವಿತ್ತು. ರಾಧಳ ಕೈಗಳು ಅವಳಿಗೆ ತಿಳಿಯದಂತೆಯೇ ಶ್ರೀನಿವಾಸಯ್ಯನ ಕರಗಳೊಡನೆ ಆಟವಾಡಲಾರಂಭಿಸಿತು.

ಚಿತ್ರ ಪೂರ್ತಿ ನೋಡಲು ಸಾಧ್ಯವಾಗಲೇ ಇಲ್ಲ. ರಾಧ ಶ್ರೀನಿ ಸಯ್ಯ ಈರ್ವರೂ ಅನಾರ್ಕಲಿ-ಸಲೀಮರಂತೆ ಮನೋಧ್ಯಾನವನದಲ್ಲಿ ವಿಹರಿಸ ಲಾರಂಭಿಸಿದರು.

ಚಿತ್ರ ಮುಗಿದ ನಂತರ ಗಾಡಿಯಲ್ಲಿ ಮನೆಗೆ ಹೊರಟು ಬಂದರು.

ಅಂತೂ ಸಾವಿತ್ರಿ ಬರುವ ಗಳಿಗೆಯ ತನಕ ರಾಧಳನ್ನು ಶ್ರೀನಿವಾಸಯ್ಯ ಬಿಟ್ಟು ಅಗಲಲಿಲ್ಲ.

## ೧೨

ಮನೆಯ ಮುಂದೆ ಎತ್ತಿನ ಗಾಡಿಯ ಸದ್ದು ಕೇಳಿಸಿದ ತಕ್ಷಣ ಶ್ರೀನಿವಾಸಯ್ಯ ಹೊರಗೆ ಬಂದನು. ಸಾವಿತ್ರಿ ಗಾಡಿಯಿಂದ ಇಳಿದು ಮನೆಯ ಕಡೆಗೆ ದೃಷ್ಟಿ ಬೀರಿದಳು. ಶ್ರೀನಿವಾಸಯ್ಯ ಹೊರಬಂದ ಕೂಡಲೆ ಅವಳ ಕಣ್ಣುಗಳು ಅವನನ್ನು ನೋಡಿ ಪ್ರಫುಲ್ಲಿತಗೊಂಡವು. ಕ್ಷಣಕಾಲ ಸ್ಥಂಬಿತಳಾದಂತೆ ನಿಂತಳು. ಶ್ರೀನಿವಾಸಯ್ಯ ಮುಂದೆ ಬಂದನು.

ಸಾವಿತ್ರಿ ಮೆಲ್ಲಗೆ ಹೇಳಿದಳು.

"ಎಷ್ಟು ಬಡವಾಗಿ ಹೋಗಿರುವಿರೀಂದ್ರೆ!"

—ಶ್ರೀನಿವಾಸಯ್ಯ ನಕ್ಕು ಹೇಳಿದ,

"ನೀನಾಗಿಲ್ಲವೇನು? ನನಗೇನು ಕಡಿಮೆಯಾಗಿತ್ತು."

"ನಡೆಯಿರಿ ಹೋಗುವ ಮನೆಯೊಳಗೆ!"

ಗಾಡಿಯವನು ಸಾಮಾನುಗಳನ್ನು ತೆಗೆದುಕೊಂಡು ಒಳಗೆ ಇಟ್ಟನು. ಸಾವಿತ್ರಿ ಕೊಟ್ಟ ದುಡ್ಡನ್ನು ತೆಗೆದುಕೊಂಡು ಹೊರಟು ಹೋದನು.

ಒಳಗೆ ಅಡುಗೆ ಮಾಡುತ್ತಿದ್ದ ರಾಧ, ಹೊರಗೆ ಬಂದಳು. ಒದ್ದೆಯಾದ ಕೈಗಳನ್ನು ಸೆರಗಿನಿಂದ ಒರಸಿಕೊಳ್ಳುತ್ತಾ ಹೇಳಿದಳು,

"ಬಂದಿರಾ ಅಕ್ಕಾ."

ಸಾವಿತ್ರಿ ಉತ್ತರವಾಗಿ ಮುಗುಳ್ನಗೆ ಬೀರಿದಳು.

ತಾಯಿಯ ಬರವನ್ನು ತಿಳಿದ ಮಕ್ಕಳು ಓಡಿ ಬಂದರು. ಸಾವಿತ್ರಿ ಅವುಗಳನ್ನು ಬರಸೆಳೆದು ಅಪ್ಪಿಕೊಂಡು ಹೇಳಿದಳು,

"ಎಲ್ಲಿ ಹೋಗಿದ್ದಿರಿ ನೀವುಗಳು?"

"ಹೊರಗೆ ಆಟವಾಡುವುದಕ್ಕೆ ಹೋಗಿದ್ದೆವು."

"ಚೀಲಗಳಲ್ಲಿ ತಿಂಡಿಯಿದೆ. ಹೋಗಿ ತೆಗೆದುಕೊಳ್ಳಿ." ಶಂಕರ–ಶಾರದೆ

ಓಡಿಹೋದರು. ಸಾವಿತ್ರಿ ಅಡುಗೆ ಕೋಣೆಯೊಳಗೆ ನಡೆದಳು. ಅಡುಗೆ ಮುಗಿದಿತ್ತು. ಶ್ರೀನಿವಾಸಯ್ಯ ಕೇಳಿದ,

"ಮಾವ ಬರಲಿಲ್ಲವೇ ?"

"ಈಗ ಸಾಧ್ಯವಿಲ್ಲ ಅಂದುಬಿಟ್ಟರು. ಇಲ್ಲಿಗೆ ಕರೆದುಕೊಂಡು ಬರಲೇ ಬೇಕೆಂದು ಎಷ್ಟೆಷ್ಟೋ ಸಾಹಸಮಾಡಿದೆ. ಆದರೆ ಅವರು ಸುತರಾಂ ಒಪ್ಪಲಿಲ್ಲ."

"ನೀನು ಬರುವಾಗ ಏನು ಹೇಳಿದರು."

"ಯಾವಾಗಲಾದರೊಮ್ಮೆ ಬರುತ್ತೇನೆ. ಈಗ ಮಾತ್ರ ನನ್ನನ್ನು ಬಲ ವಂತ ಮಾಡಬೇಡ ಅಂದರು."

ಸ್ವಲ್ಪ ತಡೆದು ಕೇಳಿದಳು,

"ನೀವು ಕೆಲಸಕ್ಕೆ ಹೋಗುತ್ತಿರುವಿರಾ ? ಇದುವರೆಗೆ ಬಹಳ ಬೇಜಾ ರಾಯಿತೇನೋ ?"

"ಕೆಲಸಕ್ಕೇನೋ ಹೋಗುತ್ತಾ ಇದ್ದೀನಿ ಸಾತೂ. ಇಲ್ದಿದ್ರೆ ಹಣ ಬರುತ್ಯೆ? ಬೇಜಾರಾಗೋದೇನು ಬಂತು? ಜೊತೆಯಲ್ಲಿ ರಾಧ ಇದ್ದಾಳಲ್ಲ ಎಲ್ಲಾ ನೋಡಿಕೊಳ್ಳುವುದಕ್ಕೆ!"

"ಹೌದು ಹೌದು." ಶ್ರೀನಿವಾಸಯ್ಯನ ಮಾತಿನ ಒಳಗುಟ್ಟು ಸಾವಿತ್ರಿಯ ಮುಗ್ಧ ಕರುಳಿಗೆ ಅರಿವಾಗಲಿಲ್ಲ.

ಗಂಡನ ಮನೆಗೆ ಬಂದ ಆತುರದಲ್ಲಿ ಸಾವಿತ್ರಿ ಹಿಗ್ಗಿದಳು. ಸಾಮಾನ್ಯ ವಾಗಿ ಎಲ್ಲರಿಗೂ ಹಾಗೇ.

ಒಂದು ಕೆಲವು ದಿನಗಳು ಬರಿಯ ಮಾತು-ಕತೆಗಳಲ್ಲಿ ಕಾಲ ಕಳೆದು ಹೋಯಿತು.

ಅಂದು ಸಾಯಂಕಾಲ ಶಂಕರ ಓಡಿ ಬಂದು ಹೇಳಿದ "ಅಮ್ಮಾ ಹೊರಗೆ ಯಾರೋ ಗಿಣಿಯನ್ನು ಮಾರಲು ತಂದಿದ್ದಾರೆ"

"ನಮಗೆ ಯಾಕೋ ಗಿಣಿ. ಸುಮ್ಮನಿರು."

"ಇಲ್ಲಮ್ಮ. ಬಹಳ ಚೆನ್ನಾಗಿದೆ. ನಮ್ಮ ಮನೆಯಲ್ಲೂ ಸಾಕಿದರೆ ಚೆನ್ನಾಗಿರುತ್ತೆ."

"ಬೆಲೆ ಎಷ್ಟಂತೆ?"

"ನನಗೊತ್ತಿಲ್ಲಮ್ಮ. ನೀನೇ ಬಂದು ಕೇಳೇ"

ಸಾವಿತ್ರಿ ಹೊರಗೆ ಬಂದು ನೋಡಿದಳು. ಯಾವನೋ ಮುದುಕ ಗಿಣಿಯನ್ನು ಹಿಡಿದು ತರುತ್ತಿದ್ದ. ಅವನನ್ನು ಕರೆದು ಕೇಳಿದಳು.

"ಏನಪ್ಪಾ ಗಿಣಿ ಮಾರುವುದಕ್ಕಿದೆಯೇಯೆ?"

"ಹೌದ್ರಮ್ಮಾ. ತೆಗೆದುಕೊಳ್ಳಿ ಕೇವಲ ಮೂರು ರೂಪಾಯಿ."

ಮಗನ ಮನಸ್ಸು ಸಮಾಧಾನಪಡಿಸಲು ಸಾವಿತ್ರಿ ಆ ಗಿಣಿಯನು ಪಂಜರದ ಸಮೇತ ತೆಗೆಸಿಕೊಟ್ಟಳು.

ಆ ಗಿಣಿಯು ಕೂಗಿ-ಕಿರುಚಿಕೊಳ್ಳುತ್ತಿದ್ದ ಧ್ವನಿಯನ್ನು ಆಲಿಸಿ ಆಲಿಸಿ ಎಲ್ಲರೂ ಹರ್ಷಪಡುತ್ತಿದ್ದರು.

ಕೆಲವೇ ದಿನಗಳಲ್ಲಿ ಆ ಗಿಣಿಯು ಎಲ್ಲರಲ್ಲೂ ಸಲಿಗೆ ಹೊಂದಿತು.

ಅವರ ಮನೆಯ ಹಿಂದೆ ಇರುವ ಉದ್ಯಾನವನದಂತಹ ತೋಟದಲ್ಲಿ ಆ ಗಿಣಿಯನ್ನು ಕರೆದುಕೊಂಡು ಹೋಗಿ ಆಡಿಸುತ್ತಿದ್ದರು.

## ೧೩

ಸಾವಿತ್ರಿಯ ಸಾನಿಧ್ಯದಲ್ಲಿ ಶ್ರೀನಿವಾಸನಿಗೆ ಎಳ್ಳಷ್ಟು ಸಂತೋಷ ವಾಗಲಿಲ್ಲ. ರಾಧಳಲ್ಲಿ ಅವನಿಗೆ ಸಿಗುತ್ತಿದ್ದ ಸುಖ, ಸಂತೋಷ, ಸಾವಿತ್ರಿ ಯಲ್ಲಿ ಕಾಣಬರುತ್ತಿರಲಿಲ್ಲ. ರಾಧಳೇ ತನ್ನ ಹೆಂಡತಿಯಾಗಿ ಬಾಳಿಕೊಂಡಿ ದ್ದಲ್ಲಿ ಎಷ್ಟು ಚೆನ್ನಾಗಿರುತ್ತಿತ್ತು! ಎಂದುಕೊಳ್ಳುತ್ತಿದ್ದನು. ಬೇವನ್ನು ಮೆದ್ದವನಿಗೆ ಬೆಲ್ಲದ ರುಚಿಯನ್ನು ಕಾಣಬಲ್ಲನೆ?

ರಾಧಳನ್ನು ಮನಃಪೂರ್ತಿ ನೋಡುವುದೇ ಕಷ್ಟವಾಗಿತ್ತು. ಸಾವಿತ್ರಿಯು ಮೂರು ಹೊತ್ತೂ ಅವನೆಡೆಯೇ ಇರುತ್ತಿದ್ದಳಾದ್ದರಿಂದ ಅವನ ನೇತ್ರಗಳು

ರಾಧಳನ್ನು ಕಾಣಲು ಅವಕಾಶವಾಗುತ್ತಿರಲಿಲ್ಲ. ಅವಳೊಡನೆ ಕೂಡಿ ಹರ್ಷ ಪಡುವ ಸಮಯವನ್ನು ಎಣಿಕೆ ಹಾಕುತ್ತಲಿದ್ದನು.

ಹೊಂಚು ಹಾಕುವ ಬೆಕ್ಕಿನಂತೆ ಆ ಕಾಲವನ್ನು ನಿರೀಕ್ಷಿಸುತ್ತಲಿದ್ದನು..

ವರಮಹಾಲಕ್ಷ್ಮಿಯ ಹಬ್ಬದ ದಿವಸವು ಬಂತು. ಸಾವಿತ್ರಿ ಅದನು ನಿಯಮದಿಂದ ಮಾಡುತ್ತಿದ್ದಳು.

ಬೆಳಿಗ್ಗೆ ಜಾಗ್ರತೆ ಎದ್ದು ಮಡಿಯುಟ್ಟು ದೇವಿಯ ಪೂಜೆ ಮಾಡಿದಳು. ಪಕ್ಕದ ಮನೆಯಲ್ಲಿದ್ದ ಪಾರ್ವತಮ್ಮನವರು ಅಂದು ಸಾಯಂಕಾಲ ತಮ್ಮ ಮನೆಗೆ ಸಾವಿತ್ರಿ, ರಾಧ ಈರ್ವರನ್ನೂ ತಮ್ಮ ಮನೆಗೆ ಅರಿಶಿನ ಕುಂಕುಮಕ್ಕೆ ಕರೆದಿದ್ದರು. ಮಧ್ಯಾಂಜೆಯಾದ ನಂತರ ಸಾವಿತ್ರಿ, ರಾಧಳನ್ನು ಕರೆದು ಕೇಳಿದಳು.

"ಬರುತ್ತೀಯಾ ರಾಧ, ಪಾರ್ವತಮ್ಮನವರ ಮನೆಗೆ ಹೋಗಿ ಬರೋಣ "

"ಇಲ್ಲ ಅಕ್ಕ. ನೀವು ಒಬ್ಬರೇ ಹೋಗಿ ಬನ್ನಿ. ನನಗೆ ಯಾಕೋ ಮೈ ಸರಿಯಾಗಿಲ್ಲ. ಕೊಂಚ ತಲೆ ನೋವು."

"ಪಕ್ಕದಲ್ಲೇ, ಹತ್ತಿರ ಕಣೇ. ಬೇಗ ಬಂದುಬಿಡಬಹುದು."

"ದಯವಿಟ್ಟು ಬೇಡಿ ಅಕ್ಕ. ಶಾರದೆಯನ್ನು ಕರೆದುಕೊಂಡು ನೀವು ಹೋಗಿ ಬನ್ನಿ."

"ನಿನ್ನಿಷ್ಟವಮ್ಮ" ಎಂದು ಸಾವಿತ್ರಿ ಶಾರದೆಯೊಂದಿಗೆ ಹೊರಟಳು.

ಸ್ವಲ್ಪ ಹೊತ್ತಿನೊಳಗಾಗಿ ಶ್ರೀನಿವಾಸಯ್ಯ ಒಳಗೆ ಬಂದ. ಹೊರಗೆ ಯಾರೂ ಇರಲಿಲ್ಲ. ಬಂದವನೇ,

"ಸಾವಿತ್ರೀ.........." ಎಂದು ಕೂಗಿದ.

ರಾಧ ಒಳಗಿದ್ದವಳು ಹೊರಗೆ ಓಡಿ ಬಂದು ಹೇಳಿದಳು.

"ಅಕ್ಕ ಮನೆಯಲ್ಲಿಲ್ಲ. ಹೊರಗೆ ಪಕ್ಕದ ಮನೆಯ ಪಾರ್ವತಮ್ಮನವರ ಮನೆಗೆ ಕುಂಕುಮ ತೆಗೆದುಕೊಂಡು ಬರಲು ಹೋಗಿದ್ದಾರೆ." ಎಂದಳು.

"ಯಾವಾಗ ಹೋದಳು?"

"ಈಗತಾನೇ" ಎನ್ನುವ ಹೊತ್ತಿಗೆ ಸರಿಯಾಗಿ ಶಾರದೆ ಒಳಗೆ ಓಡಿ ಬಂದಳು.

"ಯಾಕೆ ಬಂದೆಯೆ?" ಎಂದನು ಶ್ರೀನಿವಾಸಯ್ಯ.

"ರಾಧಕ್ಕ, ಅಮ್ಮನನ್ನೂ ಮತ್ತು ನನ್ನನ್ನೂ, ಪಾರ್ವತಮ್ಮನವರು ಅವರ ಮನೆಯಲ್ಲೇ ಊಟಕ್ಕೆ ನಿಲ್ಲಿಸಿಕೊಂಡರು. ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಅದಕ್ಕೆ ನಾವು ಅಲ್ಲಿಯೇ ಊಟ ಮಾಡ್ತೀವಿ, ಅಪ್ಪ ಬಂದರೆ ಊಟಕ್ಕೆ ಬಡಿಸು ಅಂತ ರಾಧಕ್ಕನಿಗೆ ಹೇಳು ಅಂತ ನನಗೆ ಅಮ್ಮ ಹೇಳಿದ್ದಾಳೆ" ಎಂದಳು ಶಾರದೆ.

"ಹಾಗೆ ಆಗಲಿ" ಎಂದು ರಾಧ ಹೇಳಿದಳು.

ಶ್ರೀನಿವಾಸಯ್ಯ ರಾಧಳ ಮುಖ ನೋಡಿದ. ಅವಳೂ ಅವನ ಕಡೆ ನೋಡಿದಳು. ಮುಗುಳ್ನಕ್ಕಳು. ಅವನ ದೃಷ್ಟಿಯನ್ನು ನೋಡುತ್ತಾ ರಾಧ ಹೇಳಿದಳು.

"ಯಾಕೆ ಹಾಗೆ ನನ್ನನ್ನು ನೋಡುತ್ತಾ ಇದ್ದೀರಿ?"

ಶ್ರೀನಿವಾಸಯ್ಯ ನಗುತ್ತಾ ಉತ್ತರವಿತ್ತನು.

"ಯಾಕೂ ಇಲ್ಲ, ಹೊರಗೆ ಮೂಡಬೇಕಾಗಿದ್ದ ಚಂದ್ರ ಇಂದು ನಮ್ಮ ಮನೆಯೊಳಗೇ ಮೂಡಿದ್ದಾನೆ."

"ನಿಮ್ಮ ಕವಿತ್ವ ನನಗೆ ಗೊತ್ತಾಗುವುದಿಲ್ಲ"

"ಇದು ಕವಿತ್ವವಲ್ಲ, ಕಪಿತ್ವ!"

"ಏನೋ ಒಂದು. ಬನ್ನಿ ಊಟಕ್ಕೆ" ಎಂದು ರಾಧ ಅಡುಗೆಯ ಮನೆಯೊಳಗೆ ನಡೆದಳು.

ಶ್ರೀನಿವಾಸಯ್ಯ ಯೋಚಿಸಿದ. 'ಎಂದೂ ಬಾರದ ಸುಸಮಯ ತಾನಾಗಿಯೇ ಕರಗತವಾಗಿದೆ. ಇಂತಹ ಸುಸಮಯವನ್ನು ಹಾಳುಮಾಡಿಕೊಳ್ಳಬಾರದು' ಎಂದು ಯೋಚಿಸಿ ಬಾಗಿಲಕಡೆಗೆ ಹೋಗಿ ಅದನ್ನು ಮುಂದೆ ತಳ್ಳಿ ಅಗುಳಿ ಹಾಕಿಕೊಂಡು ಅಡುಗೆಯ ಮನೆಗೆ ಬಂದನು.

ರಾಧ ಎಲೆಯಲ್ಲಿ ಬಡಿಸುತ್ತಿದ್ದಳು. ಶ್ರೀನಿವಾಸಯ್ಯ ಹೊಸ್ತಿಲಬಳಿ ನಿಂತೇ ಇದ್ದ. ಅಡುಗೆ ಬಡಿಸುತ್ತಿದ್ದ ರಾಧ ಎಲೆಗೆ ಹಾಕುವಾಗ ಬಗ್ಗುವಾಗ ಶ್ರೀನಿವಾಸಯ್ಯ ಅವಳನ್ನು ನೋಡಿದನು. ಅವಳ ನೀಳವಾದ ಜಡೆ ಅವಳ ಕುತ್ತಿಗೆಯನ್ನು ಬಳಸಿ ನೆಲಕ್ಕೆ ಸೋಂಕುತ್ತಿತ್ತು. ಬಿಗಿಯಾಗಿ ಕಟ್ಟಿದ್ದ ಸೆರಗು ಅವಳು ಬಗ್ಗುವಾಗ ಸೊಳಕವಾಗಿ ಸ್ವಲ್ಪ ಎದೆಯನ್ನು ಬಿಟ್ಟು ಸರಿದಿತ್ತು. ಒಳಗೆ ಹುದುಗಿಕೊಂಡಿದ್ದ ಎದೆ ಸೆರಗನ್ನು ಸರಿಸಿ ಹೊರ ಜಗತ್ತನ್ನು ಇಣುಕುತ್ತಿತ್ತು.

ಶ್ರೀನಿವಾಸಯ್ಯ ಮುಂದೆ ಬಂದನು. ಸೌಟನ್ನು ಹಿಡಿದುಕೊಂಡಿದ್ದ ಅವಳ ಕರವನ್ನು ಹಿಡಿದ.

"ಏನು ಮಾಡುತ್ತಿರುವಿರಿ?" ಎಂದು ಅಪ್ರತಿಭಳಾಗಿ ಕೇಳಿದಳು ರಾಧ.

ಶ್ರೀನಿವಾಸಯ್ಯ ನಕ್ಕು ಅವಳನ್ನು ತನ್ನ ಕಡೆಗೆ ಎಳೆದುಕೊಂಡನು.

"ಥೂ. ನಾಚಿಕೆಯಿಲ್ಲ- ಅಕ್ಕ ಬರುತ್ತಾರೆ. ಸುಮ್ಮನಿರಿ. ನೋಡಿದರೇನು ಗತಿ. ದೂರ ಹೋಗಿ."

"ಹೆದರಬೇಡ ರಾಧ. ಸಾವಿತ್ರಿ ಈಗ ಬರುವುದಿಲ್ಲ" ಎಂದನು. ರಾಧ ಅವನೆಳೆದ ರಭಸಕ್ಕೆ ಕಂಪಿಸಿದಳು. ಕೈ ಕೊಡಲು ಯತ್ನಿಸಿದಳು. ಆದರೆ ಬಲವಾಗಿ ಹಿಡಿದಿದ್ದ ಅವನ ಬೆರಳುಗಳನ್ನು ಬಿಡಿಸುವಷ್ಟು ಪುರುಷ ಶಕ್ತಿ ಅವಳು ಹೊಂದಿರಲಿಲ್ಲ.

"ಬೇಡಾ ಅಂದರೆ ಬೇಡ. ಈ ಸಮಯದಲ್ಲಿ ಖಂಡಿತ ಬಿಟ್ಟುಬಿಡಿ" ಎಂದು ಅಂಗಲಾಚಿದಳು ರಾಧ.

"ಅವಳು ಬರುವುದಿಲ್ಲ ರಾಧಾ. ಖಂಡಿತ ಇನ್ನು ಒಂದು ಘಂಟೆ ಬರುವುದಿಲ್ಲ" ಎಂದವನೇ ಅವಳನ್ನು ಬಲವಾಗಿ ಅಪ್ಪಿದನು. ಬಿರುಗಾಳಿಗೆ ಕೆದರಿದ ಅಲೆಯೊಂದು ಮತ್ತೊಂದು ಅಲೆಗೆ ಬಡಿದು ಮುಂದಕ್ಕೆ ತಳ್ಳುವಂತೆ ಅವರು ಇಹಲೋಕವನ್ನೇ ಮರೆತರು.

ಸಾವಿತ್ರಿ ಬಂದು ಬಾಗಿಲು ತಟ್ಟಿದ ಸಮಯ ಬಂದಾಗಲೇ ಅವರಿಗೆ

ಸಮಾಧಿಯಿಂದ ಎಚ್ಚರವಾದುದು. ಸರಕ್ಕನೆ ಶ್ರೀನಿವಾಸಯ್ಯ ಹೋಗಿ ಹಾಸಿಗೆಯ ಮೇಲೆ ಮಲಗಿಬಿಟ್ಟನು. ರಾಧೆ ಮುಂದೆ ಬಂದು ಬಾಗಿಲು ತೆಗೆದಳು.

"ಅವರು ಬಂದರೇನು?"

"ಬಂದರು"

"ಊಟವಾಯಿತೆ?"

"ಆಯಿತು"

"ಮಲಗಿಕೊಂಡಿದ್ದಾರೆ ಅಂತ ಕಾಣುತ್ತೆ. ನೀನೇಕೆ ಇನ್ನೂ ಕುಳಿತೇ ಇದ್ದೀಯಾ?"

"ನೀವೂ ಬರಲಿ ಅಂತ ಸುಮ್ಮನೆ ಕುಳಿತಿದ್ದೆ" ಎಂದಳು ರಾಧೆ.

ಮಗನೂ ಮಲಗಿದ್ದುದನ್ನು ಕಂಡು ಶಾರದೆಯನ್ನು ಮಲಗಿಸಿ ಸಾವಿತ್ರಿ ಹಾಸಿಗೆಯ ಮೇಲೆ ಉರುಳಿಕೊಂಡಳು. ಮಲಗಿದ ಕೂಡಲೆ ನಿದ್ರಾದೇವಿ ಓಡಿಬಂದು ಅವಳನ್ನು ಬರಸೆಳೆದು ಅಪ್ಪಿಕೊಂಡಳು.

ತಮ್ಮ ನಡತೆ ಸಾವಿತ್ರಿಗೆ ತಿಳಿಯದಿದ್ದುದನ್ನು ಕಂಡು ರಾಧೆ ಮತ್ತು ಶ್ರೀನಿವಾಸಯ್ಯ ಈರ್ವರೂ ಧೀರ್ಘವಾಗಿ ನಿಟ್ಟುಸಿರು ಬಿಟ್ಟರು.

ಇರುಳು ಕಳೆದು ಪ್ರಭಾತ ಉದಯಿಸಿತು. ಎಂದಿನಂತೆ ಶ್ರೀನಿವಾಸಯ್ಯ ಕೆಲಸಕ್ಕೆ ತೆರಳಿದನು.

ಮೂರು ದಿವಸಗಳು ಗಾಡಿಯ ಚಕ್ರದಂತೆ ಉರುಳಿಹೋಯಿತು. ಭಾನುವಾರ ಒಂದು ಅಂದು ಶ್ರೀನಿವಾಸಯ್ಯ ಮನೆಯಲ್ಲಿಯೇ ಇದ್ದ.

ಮಧ್ಯಾಹ್ನ ಸಾವಿತ್ರಿ ಮಲಗಿ ನಿದ್ರೆ ಹೋಗುತ್ತಿದ್ದಳು. ಶ್ರೀನಿವಾಸಯ್ಯ ಯಾವುದೋ ಪುಸ್ತಕವನ್ನು ಓದುತ್ತಿದ್ದನು. ಓದಿ ಬೇಸರವಾಗಿ ಪುಸ್ತಕವನ್ನು ಅತ್ತ ಒಗೆದನು. ಸುತ್ತಲೂ ಒಂದು ಬಾರಿ ನೋಡಿದನು. ಸಾವಿತ್ರಿ ಮಲಗಿ ನಿದ್ರೆ ಮಾಡುತ್ತಿದ್ದಳು. ಹೋಗಲಿ ಮಲಗುವ ಎಂದುಕೊಂಡು ಹಾಸಿಗೆಯನ್ನು ಉರುಳಿಸಿ ಅದರ ಮೇಲೆ ಮಲಗಿಕೊಂಡನು.

ಎಷ್ಟೋ ಹೊತ್ತು ಕಳೆಯಿತು. ಹಾಳು ನಿದ್ರೆ! ಕಣ್ಣಿಗೆ ನಿದ್ರೆಯೇ ಬರಲೊಲ್ಲದು. ಬಹಳ ಹೊತ್ತು ಹಾಗೆಯಲ್ಲೇ ಉರುಳಿ ಬೇಸರವಾಗಿ ಹಾಸುಗೆಯಿಂದ ಎದ್ದನು. ಹೋಗಲಿ ಮನೆಯ ಹಿಂದಿನ ತೋಟಕ್ಕಾದರೂ ಹೋಗಿ ಬರೋಣ ಎಂದುಕೊಂಡು ಹೊರಗೆ ಬಂದನು.

ತೋಟವು ಮನೆಯ ಹಿಂಬಾಗದಲ್ಲಿಯೇ ಇತ್ತು. ಸಾಯಂಕಾಲ ಸಿನೇಮಾಕ್ಕೆ ಹೋಗುವುದು ಉಚಿತ ಎಂದುಕೊಂಡ.

ತನ್ನ ಮನೆಯ ಹಿಂದೆಯೇ ತೋಟವಿದ್ದರೂ ಶ್ರೀನಿವಾಸಯ್ಯ ಅದನ್ನು ಅಷ್ಟಾಗಿ ಅಡಿಗಡಿಗೆ ಹೋಗಿ ನೋಡುತ್ತಿರಲಿಲ್ಲ. ಎಲ್ಲೆಲ್ಲೂ ಹಬ್ಬಿದ್ದ ಹೂವಿನ ಬಳ್ಳಿಗಳು ಬಿಸಿಲಿನಲ್ಲೂ ಹೊಳೆಯುತ್ತಿದ್ದುವು. ತರಕಾರಿಯ ಗಿಡಗಳು ಬೆಳೆದು ಮೈತುಂಬ ತುಂಬಿದ ಆಭರಣಗಳಂತೆ ಕಾಯಿ-ಹಣ್ಣುಗಳನ್ನು ತುಂಬಿಕೊಂಡು ಮೆರೆಯುತ್ತಿದ್ದುವು. ಮೆಲ್ಲ ಮೆಲ್ಲನೆ ಬೀಸುತ್ತಿದ್ದ ಗಾಳಿಗೆ ಗಿಡಗಳು ನಿಧಾನವಾಗಿ ಅಲುಗುತ್ತಿದ್ದುವು. ಅಲಂಕಾರದ ಭಾರದ ಆಭರಣಗಳನ್ನು ತೊಟ್ಟು ಭಾರಿ ಸೀರೆಯನ್ನು ಉಟ್ಟು ನಿಧಾನವಾಗಿ ಚಲಿಸುವ ಯುವತಿಯಂತೆ ಕಾಣಿಸುತ್ತಲಿತ್ತು. ಹೂಗಳೂ ನಕ್ಕಂತೆ ಭಾಸವಾಗುತ್ತಲಿತ್ತು. ಪ್ರತಿಯೊಂದನ್ನೂ ಬಿಡದೆ ನೋಡುತ್ತಾ ಶ್ರೀನಿವಾಸಯ್ಯ ತೋಟದ ಒಳಹೊಕ್ಕು ನಡೆದ. ಗಿಡಗಳ ರೆಂಬೆಯ ನೆರಳಿನಿಂದ, ದಗೆ ಬಹಳವಾಗಿದ್ದರೂ, ಶೀತಲವಾಗಿದ್ದಂತೆ ತೋರಹತ್ತಿತು. ಹಾಗೆಯೇ ಶ್ರೀನಿವಾಸಯ್ಯ ಮುಂದೆ ನೋಡುತ್ತಿದಂತೆ ಯಾರದೋ ಬಳೆಯ ಶಬ್ದ ಕೇಳಿಬಂತು. ಅವನಿಗೆ ಅತೀವ ಆಶ್ಚರ್ಯವಾಯಿತು. ಕುತೂಹಲದಿಂದ ಶ್ರೀನಿವಾಸಯ್ಯ ನೋಡಿದ. ಎದುರಿಗೆ ರಾಧ! ಅವಳೇ ರಾಧ!!

ಅವಳು ಕೈಯಲ್ಲಿ ಪಂಜರದಿಂದ ತೆಗೆದ ಗಿಣಿಯನ್ನು ಹಿಡಿದು ನಿಂತಿದ್ದಳು. ಅವಳ ಕಣ್ಣುಗಳು ಎದುರಿಗಿರುವ ಹೂವಿನೆಡೆ ನೋಡುತ್ತಲಿದ್ದುವು. ಶ್ರೀನಿವಾಸಯ್ಯ ಚಕಿತನಾದ. ತಾನು ಕನಸಿನಲ್ಲೂ ರಾಧಳನ್ನು ಅಲ್ಲಿ ಭೇಟಿ ಮಾಡುವೆನೆಂದು ಎಣಿಸಿರಲಿಲ್ಲ.

ರಾಧಳನ್ನು ನೋಡುತ್ತಾ ಅವನು ಮುನ್ನುಗ್ಗಿದ. ಅವನ ಪದಾಘಾತದ ಧ್ವನಿಯನ್ನು ಆಲಿಸಿ ರಾಧ ನೋಡಿದಳು. ಹೌದು ಅವರೇ!

ಅವಳು ಭಯದಿಂದ ಕಂಪಿಸಿದಳು. ಸಾವಿತ್ರಿ ಕಂಡರೇನು ಗತಿ? ಎಂದುಕೊಂಡಳು.

ಶ್ರೀನಿವಾಸಯ್ಯ ರಾಧಳ ಕೈಹಿಡಿದ.

"ಸಾವಿತ್ರಿ ಬರುತ್ತಾಳೇಂದ್ರೆ. ದೂರ ಇರಿ"–ಓಡಿ ಹೋಗಲೆತ್ನಿಸಿದಳು.

"ಅವಳು ನಿದ್ರೆ ಮಾಡುತ್ತಿದ್ದಾಳೆ ರಾಧಾ. ಭಯವೇನೂ ಇಲ್ಲ."

ರಾಧಳ ಮೋಹಕ ರೂಪು ಅವನನ್ನು ಸೆರೆಹಾಕಿತು.

ಮಧು ತುಂಬಿದ ಅವಳ ಅಧರದಿಂದ ಪಾನ ಮಾಡಲೆತ್ನಿಸಿದ. ರಾಧಳ ಬೇಡವೆಂದಿದ್ದ ಕೈ ಶ್ರೀನಿವಾಸಯ್ಯನ ಬುಜವನ್ನು ಬಳಸಿತು.

ಎಷ್ಟು ಹೊತ್ತು ಆ ರೀತಿ ಕಳೆದರೂ ಅವರಿಗೆ ತಿಳಿಯದಾಗದ ಸನ್ನಿವೇಶ ವಾಗಿತ್ತು.

........

ಹೊರಗೆ ಶಾರದೆ ಕೂಗಿದ ಶಬ್ದಕ್ಕೆ ಸಾವಿತ್ರಿಗೆ ತಟಕ್ಕನೆ ಎಚ್ಚರ ವಾಯಿತು. ವಿಷಯವೇನಿರಬಹುದೆಂದು ಕೂಡಲೆ ಎದ್ದು ಹೊರಗೆ ಬಂದಳು. ಶಾರದೆ ದೂರ ಹೋಗುತ್ತಿದ್ದಳು. ಬಹುಶಃ ಶಂಕರನೊಂದಿಗೆ ಆಟವಾಡು ತ್ತಿರಬಹುದೆಂದುಕೊಂಡು ಸಾವಿತ್ರಿ ಒಳಗೆ ಬಂದಳು. ರಾಧ ಇರಲಿಲ್ಲ. ಶ್ರೀನಿವಾಸಯ್ಯನೂ ಇರಲಿಲ್ಲ. ಇಬ್ಬರೂ ಎಲ್ಲಿಗೆ ಹೋಗಿರಬಹುದು!

ಬಹುಶಃ ತೋಟಕ್ಕೇನಾದರೂ ಹೋಗಿರುವರೇನೋ ಎಂದು ಕೊಂಡು ಸಾವಿತ್ರಿ ತೋಟಕ್ಕೆ ಹೊರಟಳು.

ತನ್ನ ಕೈಗಳಿಂದ ಬೆಳೆಸಿದ ಆ ಗಿಡ ಮತ್ತು ಹೂಗಳನ್ನು ನೋಡುತ್ತಾ ಒಳ ನಡೆದಳು.

ಒಳಗಿನಿಂದ ಯಾರದೋ ಮಾತನಾಡುವ ಶಬ್ದ ಕೇಳಿಸಿತು. ಯಾರಿರ ಬಹುದು? ಅವರೇನಾದರೂ ಬಂದಿರುವರೇನೋ ಎಂದುಕೊಂಡಳು.

ಗಿಡಗಳ ಮರೆಯಿಂದ ಅಸ್ಪಷ್ಟ ಛಾಯೆ ಕಾಣಿಸಿತು. ಕುತೂಹಲದಿಂದ ಸಾವಿತ್ರಿ ವೀಕ್ಷಿಸಿದಳು. ನೋಡುತ್ತಿದ್ದಂತೆ ಅವಳ ಮೈ ಮತ್ತು ಅಂಗಾಂಗ ಗಳೆಲ್ಲವೂ ಬೆವರಿಟ್ಟಿತು. ಮತ್ತು ತಂಗೆಲೆಯಂತೆ ನಡುಗಿತು. ಎಂತಹ ದೃಶ್ಯವದು!

ಶ್ರೀನಿವಾಸಯ್ಯನ ಎದೆಯ ಮೇಲೆ ರಾಧ ತನ್ನ ತಲೆಯನ್ನು ಒರಗಿಸಿ ಪಕ್ಕದಲ್ಲಿ ಕುಳಿತುಕೊಂಡು ಮಾತನಾಡುತ್ತಲಿದ್ದಾಳೆ. ಆದರೆ ಮಾತುಗಳು ಕೇಳಲಾರದಷ್ಟು ಮೆಲ್ಲಗೆ ಮಾತನಾಡುತ್ತಿದ್ದರು. ಸಾವಿತ್ರಿ ಮುಂದೆ ಬಂದಳು. ಅವರ ವ್ಯಾಪಾರ ಕ್ಷಣಮಾತ್ರದಲ್ಲಿ ಅರಿವಾಯಿತು. ಸ್ತಂಭೀಭೂತಳಾದಳು. ದಿಗ್ಭ್ರಮೆಗೊಂಡಳು. ಅವಳನ್ನು ಕಂಡ ರಾಧ ಎದ್ದು ನಿಂತಳು. ಅವಳು ಹೆದರಿಕೆಯಿಂದ ನಡುಗತೊಡಗಿದಳು. ಊಹಿಸಲಾರದ ಕಾರ್ಯ ನಡೆದು ಹೋಗಿತ್ತು. ಏನು ಮಾಡಲೂ ತೋಚದೆ ತಕ್ಷಣ ಎದ್ದು ಹೊರಟಳು. ಶ್ರೀನಿವಾಯ್ಯನ ಮುಖವೂ ಬಿಳಚಿಹೋಗಿತ್ತು. ಕ್ಷಮೆ ಬೇಡುವ ನೋಟ ವಾಗಿತ್ತು.

ಸಾವಿತ್ರಿಗೆ ಏನೂ ತೋರದಂತಾಯಿತು. ನೆಟ್ಟಗೆ ಒಳಗೆ ನಡೆದು ಬಿಟ್ಟಳು. ಅವಳಿಗೆ ಯಾವ ಆಸರವೂ ಇಲ್ಲವಾಗಿತ್ತು. ಗಂಡನನ್ನು ನಂಬಿದ್ದ ಮುಗ್ಧ ಹೆಣ್ಣು. ಅವನಿಗಾಗಿ ಎಷ್ಟು ಪರಿತಪಿಸುತ್ತಿದ್ದಳು? ಹಗಲಿರುಳೂ ಅವನಿಗಾಗಿ ಎಷ್ಟು ವೇದನೆ ಪಡುತ್ತಿದ್ದಳು? ಅಂತಹವನು ತನಗೆ ಮಾಡಿದುದಾದರೂ ಏನು? 'ದ್ರೋಹ....ನಂಬಿಕೆ ದ್ರೋಹ!

"ತಾನು ಊರಲ್ಲಿಲ್ಲದಿದ್ದಾಗ ಬೆಳೆದ ಸಂಭಂದವಿರಬಹುದು" ಮಿಂಚಿನಂತೆ ಸಾವಿತ್ರಿಗೆ ಹೊಳೆಯಿತು. ಅದಕ್ಕಾಗಿಯೇ ನನ್ನನ್ನು ಅಲ್ಲಿ ಬಿಟ್ಟು ಬಂದ ರೇನೊ!..........ನಾನಾಗಿಯೇ ತಲೆಗೆ ಕಲ್ಲು ಹಾಕಿಕೊಂಡೆ!....ಅವಳಿಗೆ ಆಶ್ರಯ ಕೊಟ್ಟದ್ದಕ್ಕಲ್ಲವೆ ಇಷ್ಟೆಲ್ಲಾ! ನಾನು ಮಾಡಿದ ಉಪಕಾರಕ್ಕೆ ಅವಳು ಕೊಟ್ಟ ಬೆಲೆಯೇನು?......ಪಾಪಿ......ಉಪ್ಪುತಿಂದ ಮನೆಗೆ ಎರಡು ಬಗೆದ ಕಂಟಕಿ!......ತಲೆದಿಂಬಿಗೆ ಮುಖ ಮುಚ್ಚಿ ಅತ್ತಳು ಸಾವಿತ್ರಿ, ಪುನಃಪೂರ್ತಿ ಅತ್ತಳು. ತಾನು ಇರುವುದಾದರೂ ಯಾತಕ್ಕೆ? ಏನು ಸುಖ ಅನುಭವಿಸಲು?

ಇರುಳು ಕಳೆದು ಹಗಲು ಬಂತು. ಸಾವಿತ್ರಿ ಹಾಸಿಗೆ ಬಿಟ್ಟು ಏಳಲೇ ಇಲ್ಲ. ಏನೋ ತಿಳಿಯಿತು. ದಿಗ್ಗನೆ ಎದ್ದಳು. ಹೊರಗೆ ನೋಡಿದಳು. ಶ್ರೀನಿವಾಸಯ್ಯ [illegible] ಹೊರಟುಹೋಗಿದ್ದ. ರಾಧ ಮೂಲೆಯಲ್ಲಿ ಅಧೋವಧನಳಾಗಿ ಕುಳಿತಿದ್ದಳು. ಶಂಕರ-ಶಾರದೆ ಎದ್ದು ಕುಳಿತಿದ್ದರು. ಅಮ್ಮ ಬಂದ ಒಡನೆ ಕಕ್ಕಾಬಿಕ್ಕಿಯಾಗಿ ಕಣ್ಣು ಕಣ್ಣು ಬಿಡುತ್ತಿದ್ದರು. ಸಾಯಂಕಾಲ ನಾಲಕ್ಕು ಘಂಟೆ ಆಗುತ್ತಾ ಬಂತು. ಹುಡುಗರನ್ನು ಅಂದು ಸ್ಕೂಲಿಗೆ ಕಳಿಸಲಿಲ್ಲ. ತನ್ನ ಬಟ್ಟೆ-ಬರೆ ಎಲ್ಲವೂ ಗಂಟಿನಲ್ಲಿ ಕಟ್ಟಿದಳು. ಮಕ್ಕಳ ಬಟ್ಟೆಗಳನ್ನೂ ಕಟ್ಟಿದಳು. ನೆಟ್ಟಗೆ ತಂದೆಯ ಬಳಿ ಹೋಗಿಬಿಡುವುದೆಂದು ತೀರ್ಮಾನಿಸಿಕೊಂಡಳು. ಈ ಜನ್ಮದಲ್ಲಿ ಮತ್ತೆ ಗಂಡನ ಮನೆಯ ಹೊಸ್ತಿಲನ್ನು ದಾಟಿ ಒಳಗೆ ಹೋಗಬಾರದು ಎಂಬ ಹಠ ತೊಟ್ಟಳು.

ಶಂಕರ ಮತ್ತು ಶಾರದೆಯರನ್ನು ಕರೆದು ತಲೆ ಬಾಚಿದಳು. ಮುಖ ತೊಳೆದಳು. ಎಲ್ಲವೂ ಸಿದ್ಧವಾಯಿತು.

ನಾಲಕ್ಕುವರೆ ಘಂಟೆ. ಸಾವಿತ್ರಿಯು ಕಟ್ಟಿಟ್ಟ ಸಾಮಾನುಗಳನ್ನು ತೆಗೆದುಕೊಂಡು ಮಕ್ಕಳೊಡನೆ ಹೊರಟೇಬಿಟ್ಟಳು.

ಆತುರಪಡಬಾರದೆಂದು ಮನಸ್ಸು ತಡೆದರೂ ನಿಲ್ಲದೆ ಹೋಗಲು ಸಿದ್ಧವಾದಳು. ಇದನ್ನೆಲ್ಲಾ ನೋಡುತ್ತಿದ್ದ ರಾಧ ಓಡಿ ಬಂದು ಸಾವಿತ್ರಿಯ ಕಾಲಿಗೆ ಬಿದ್ದಳು. ಬೇಡಿಕೊಂಡಳು. ಧೈರ್ಯವಾಗಿ ಸಾವಿತ್ರಿ ಮುನ್ನುಗ್ಗಿದಳು.

"ಛೀ!......ಪಾಪಿ....ನಂಬಿಕೆ ದ್ರೋಹ ಮಾಡಿದ ಪಾತಕಿ. ಅವರೊಡನೆ ನೀನೆ ಸಂಸಾರ ಸಾಗಿಸಿಕೊಂಡು ಸುಖವಾಗಿರು!" ಎಂದು ಹೇಳಿ ಹೊಸ್ತಿಲಿನ ಆಚೆ ಅಡಿಯಿಟ್ಟಿತು.

## ೧೪

ರಾತ್ರಿ ಶ್ರೀನಿವಾಸಯ್ಯ ಮನೆಗೆ ಬಂದನು. ಹೆಂಡತಿಯ ಮುಖ ಹೇಗೆ ನೋಡಬೇಕೆಂಬ ಹೆದರಿಕೆ. ಅವಳು ಕೇಳಿದರೆ ಏನು ಉತ್ತರ ಕೊಡಬೇಕು? ಅಂತೂ ಯೋಚಿಸುತ್ತಾ ಬರುತ್ತಲೇ ಮನೆ ಸಿಕ್ಕಿತು.

ಮನೆ ಒಳಗೆ ನಿಶ್ಶಬ್ದ. ಮಕ್ಕಳ ಕೂಗಲಾಟವಿಲ್ಲ. ಹೆಂಡತಿಯ ಸಂಭ್ರಮದ ಸುಳಿವಿಲ್ಲ. ಸ್ಮಶಾನದಂತಿತ್ತು. ಮೌನ ರೂಪವನ್ನು ತಾಳಿತ್ತು. ಒಳಗೆ ಬಂದವನೇ ಶ್ರೀನಿವಾಸಯ್ಯ ಸುತ್ತಲೂ ನೋಡಿದ. ಹಾಸಿಗೆಯ ಮೇಲೆ ಶಶಿಧರ ನಿದ್ರೆ ಮಾಡುತ್ತಿದ್ದನು. ಮೂಲೆಯಲ್ಲಿ ಅಧೋ ಮುಖಳಾಗಿ ರಾಧ ಕುಳಿತಿದ್ದಳು. ಶ್ರೀನಿವಾಸಯ್ಯ ಒಳಗೆ ಹೋದನು. ಅಡುಗೆ ಮನೆಯಲ್ಲಿ ಇಣುಕಿ ನೋಡಿದನು. ಸಾವಿತ್ರಿಯ ಸುಳಿವಿಲ್ಲ.

ಮೆಲ್ಲಗೆ ರಾಧ ತಲೆ ಎತ್ತಿದಳು. ಶ್ರೀನಿವಾಸಯ್ಯನ ದೃಷ್ಟಿ ಪ್ರಶ್ನಾರ್ಥಕ ವಾಗಿತ್ತು. ಕಡೆಗೆ ಕೇಳಿದನು.

"ಸಾವಿತ್ರಿ ಎಲ್ಲಿ?"

"ಇಂದು ಮಧ್ಯಾಹ್ನವೇ ಮಕ್ಕಳೊಡನೆ ಹೊರಟು ಹೋದಳು. ಎಲ್ಲಿಗೆ ಎನ್ನುವುದು ಕೂಡ ನನಗೆ ಹೇಳಲಿಲ್ಲ."—ರಾಧ ಹೇಳಿದಳು.

ಶ್ರೀನಿವಾಸಯ್ಯ ಯೋಚಿಸಿದ–"ಬಹಶಃ ಅವಳು ತೌರು ಮನೆಗೆ ಹೋಗಿರಬಹುದು. ಎಲ್ಲಿಗೆ ಹೋಗುತ್ತಾಳೆ. ಮತ್ತೆ ಬಂದೇ ಬರುತ್ತಾಳೆ."

ಅವನ ಮುಖದಲ್ಲಿ ಸಂತೋಷದ ಚಿಹ್ನೆ ಎದ್ದು ಕಾಣುತಿತ್ತು.

"ಊಟಕ್ಕೆ ಬಡಿಸುತ್ತೀಯಾ?" ಶ್ರೀನಿವಾಸಯ್ಯ ಅಡುಗೆ ಮನೆಗೆ ನಡೆದ. ರಾಧ ಅವನನ್ನು ಹಿಂಬಾಲಿಸಿದಳು.

ಊಟ ಮೌನವಾಗಿ ಸಾಗಿತು.

ದಿನ ಕಳೆದಂತೆ ರಾಧ, ಶ್ರೀನಿವಾಸಯ್ಯನ ಪತ್ನಿಯೇ ಆಗಿ ಹೋದಳು. ಮತ್ತೆ ಆನಂದದ ಲಹರಿ ತಾಂಡವವಾಡತೊಡಗಿತು. ಸಾವಿತ್ರಿಯನ್ನು ಮರೆತೇ ಬಿಟ್ಟರು.

ಈಗೀಗ ರಾಧೆಗೆ ಬೇಸರವಾಗತೊಡಗಿತ್ತು. ಮೊದಲು ಸಾವಿತ್ರಿ ಮಾತನಾಡುತ್ತಿದ್ದಳು. ಅಂತೂ ಹೇಗೋ ಕಾಲ ತಳ್ಳಿಹೋಗುತಿತ್ತು. ಆದರೆ ಈಗ? ಶಶಿಧರ ಸ್ಕೂಲಿಗೆ ಹೋಗಿಬಿಡುತ್ತಿದ್ದ. ಶ್ರೀನಿವಾಸಯ್ಯ ಕೆಲಸಕ್ಕೆ ಹೋಗುತ್ತಿದ್ದ. ಮನೆಯಲ್ಲಿ ಒಬ್ಬಳೇ ಒಬ್ಬಳು ರಾಧ. ಬೇಸರ ಕಳೆಯಲು ಹೊರಗಿನ ನೆರೆಮನೆಯನ್ನು ಪರಿಚಯಮಾಡಿಕೊಳ್ಳತೊಡಗಿದಳು. ಕೆಲವು ದಿನಗಳು ಕಳೆಯುವ ಮುನ್ನವೇ ರಾಧಳಿಗೆ ಎಲ್ಲರೂ ಪರಿಚಯವಾದರು. ಆ ಬೀದಿಯಲ್ಲಿರುವ ಹೆಂಗಸರುಗಳ ನಾಲಿಗೆಯಲ್ಲಿ ಯಾವಾಗಲೂ ರಾಧೆಯೆ!

ರಾಧೆಗೆ ಪರಿಚಯವಾದಂದಿನಿಂದ ಹೊರಗಿನವರು ಮನೆಗೆ ಬರಲಾರಂಭಿಸಿದರು. ಬಂದವರ ಅತಿಥಿ, ಸತ್ಕಾರ ಮೇರೆ ಮೀರಿತ್ತು. ಶ್ರೀನಿವಾಸಯ್ಯನಿಗೆ ಬರುತ್ತಿದ್ದ ಸಂಬಳವೆಲ್ಲವೂ ಎಲ್ಲರ ತಿಂಡಿ-ಕಾಫಿಗೆ ಖರ್ಚು ಆಗುವಂತಿತ್ತು.

ಶ್ರೀನಿವಾಸಯ್ಯ ಸೂಕ್ಷ್ಮವಾಗಿ ನೋಡತೊಡಗಿದನು. ರಾಧಳ ಸ್ವಂತ ಖರ್ಚಿಗೆ ಎಷ್ಟೋ ದುಡ್ಡು ಕೊಡಬೇಕಾಗಿತ್ತು. ಈಗೀಗ ಪೌಡರ್, ಸ್ನೋಗಳ ಹಾವಳಿ ಮಿತಿಮೀರಿತ್ತು.

ಪಕ್ಕದ ಬೀದಿಯ ಅರುಣಾಚಲಂ ಹೆಂಡತಿ ಗೋದಾವರಿಬಾಯಿ ಹೆಂಗಸರ ಕ್ಲಬ್ಬಿನ ಪ್ರೆಸಿಡೆಂಟ್. ರಾಧಳ ಪರಿಚಯವಾದೊಡನೇ, ಅವಳನು ತನ್ನ ಕ್ಲಬ್ಬಿನ ಮೆಂಬರ್ ಆಗಲು ಕೇಳಿಕೊಂಡಳು. ಸರಿ, ಕೇಳುವುದಿನ್ನೇನು? ಮಾರನೆಯ ದಿನದಿಂದ ರಾಧ ಕ್ಲಬ್ಬಿಗೆ ಹೋಗಲಾರಂಭಿಸಿದಳು.

ಶ್ರೀನಿವಾಸಯ್ಯ ಏನೂ ಹೇಳಲಾರದವನಾಗಿ ಹೋದನು. ಅಡ್ಡ ಬಂದರೆ, ರಾಧ ಎಲ್ಲಿ ತನ್ನ ಮೇಲೆ ಕೋಪಗೊಳ್ಳುವಳೋ ಎಂದುಕೊಂಡು ಸುಮ್ಮನಾದನು.

ಕಡೆಗೆ ಎಷ್ಟು ದಿನ ಸುಮ್ಮನೆ ಕುಳಿತುಕೊಂಡಾನು? ರಾಧಳನ್ನು ಕರೆದು "ಅಷ್ಟು ವಿಪರೀತ ಖರ್ಚು ಆಗುತ್ತಿದೆ. ಸ್ವಲ್ಪ ಕಡಮೆ ಮಾಡಬಾರದೆ?" ಎಂದು ಅಂಜುತ್ತಾ ಕೇಳಿದ.

ಇದನ್ನು ಕೇಳಿ ರಾಧ ಮೌನವಾಗಿ ನಕ್ಕಳು.

ರಾಧಳ ಸೌಂದರ್ಯ ಅವನನ್ನು ಸೆರೆಹಾಕಿತ್ತು. ಅವಳ ರೂಪವನ್ನು ಅದೆಷ್ಟು ಹೊತ್ತು ನೋಡಿದರೂ ತೃಪ್ತಿಯೇ ಕಾಣುತ್ತಿರಲಿಲ್ಲ. ಅವಳೊಡನೆ ದಿನವೂ ಸಾಯಂಕಾಲದ ಹೊತ್ತು ವಾಯು ವಿಹಾರಕ್ಕೆ ಕರೆದೊಯ್ಯುತ್ತಿದ್ದನು. ಆದರೆ ಈಗ ತಾನು ಬರುವುದಕ್ಕೆ ಮುಂಚೆಯೇ ಅವಳು ಬಾಗಿಲಿಗೆ ಬೀಗವನ್ನು ಹಾಕಿ ಹೊರಟುಬಿಡುತ್ತಿದ್ದಳು. ಶ್ರೀನಿವಾಸಯ್ಯ ಬಂದವನು ಬಾಗಿಲನ್ನು ನೋಡಿ ಒಂಟಿಯಾಗಿ ಹಿಂದಿರುಗಬೇಕಿತ್ತು.

"ನಾನು ಬರುವವರೆಗೂ ಅದೇಕೆ ಇರಬಾರದು? ನಂತರ ನಾವಿಬ್ಬರೂ ಹೊರಗೆ ಅಡ್ಡಾಡಲು ಹೋಗಬಹುದಲ್ಲಾ?" ಶ್ರೀನಿವಾಸಯ್ಯ ಕೇಳುತ್ತಿದ್ದನು ಆಗಾಗ್ಗೆ.

"ಸಾಯಂಕಾಲದ ಹೊತ್ತು ನಮ್ಮ ಕ್ಲಬ್ಬಿನಲ್ಲಿ ಎಲ್ಲರೂ ಸೇರಿ ಚರ್ಚೆ ಮಾಡುತ್ತಿರುತ್ತೇವೆ. ನಾನು ಬರುವುದಿಲ್ಲವೆಂದರೂ ಗೋದಾವರಿಬಾಯಿ ಸುಮ್ಮನೆ ಬಿಡುವುದಿಲ್ಲ. ಬಿಡದೆ ಎಳೆದುಕೊಂಡು ಹೋಗಿಬಿಡುತ್ತಾಳೆ."

ರಾಧಳ ಸಮಾಧಾನ ಶ್ರೀನಿವಾಸಯ್ಯನಿಗೆ ರೋಷವನ್ನು ಉಕ್ಕಿಸುತ್ತಲಿತ್ತು. ಆದರೆ ಅದನ್ನು ತಡೆಯುತ್ತಿದ್ದನು.

ಭಾನುವಾರದ ದಿವಸಗಳಲ್ಲಿ ಕೂಡ ರಾಧ ಶ್ರೀನಿವಾಸಯ್ಯನ ಬಳಿ ಇರುತ್ತಿರಲಿಲ್ಲ. ಶಶಿಧರನೂ ಕೂಡ ಹೇಳುವವರು–ಕೇಳುವವರಿಲ್ಲದೆ ಸಿಕ್ಕಿದೆಡೆ ಅಲೆಯುತ್ತಿದ್ದನು. ಜನರಿಲ್ಲದ ಮನೆಯಲ್ಲಿ ತಾನೊಬ್ಬನೇ ಒಂಟಿಯಾಗಿ ಕಾಲ ಕಳೆದೂ ಕಳೆದೂ ಬೇಸರವಾಗುತ್ತಲಿತ್ತು.

ಶ್ರೀನಿವಾಸಯ್ಯನಿಗೆ ತನ್ನ ತಪ್ಪಿನ ಅರಿವಾಗುತ್ತಿತ್ತು. "ಸಾವಿತ್ರಿಗೆ

ಏತಕ್ಕೆ ನಾನು ಮೋಸ ಮಾಡಿದೆ? ಅವಳ ಕೋಮಲ ಮನಸ್ಸನ್ನು ಈ ಕಠೋರ ಶಿಕ್ಷೆಗೆ ಗುರಿಮಾಡಿದೆನಲ್ಲಾ? ಆದರೆ ರಾಧಳಲ್ಲಿ ಕಂಡ ಸುಖ ವಾದರೂ ಏನು? ಕೇವಲ ಆತುರಪಟ್ಟು ಮಾಡಿಕೊಂಡ ಅನಾಚಾರ ಇದು. ಆದರೂ ಸಾವಿತ್ರಿಯ ಮನಸ್ಸು ಪುಷ್ಪದಂತಿರುವುದು. ಅವಳು ಖಂಡಿತ ತನ್ನನ್ನು ಬಿಟ್ಟಿರಲಾರಳು, ಬಂದೇಬರುವಳು ಕೆಲವು ದಿನಗಳು ತಾನೇ, ಕಳೆದ ಬಳಿಕ ನನ್ನಲ್ಲಿ ಖಂಡಿತ ಬರುವಳು. ಆಗ ಅವಳ ಕ್ಷಮೆಯನ್ನು ಬೇಡ ಬೇಕು.

ಬಿಡುವು ದೊರೆತಾಗಲೆಲ್ಲಾ ಅವನಿಗೆ ಇದೇ ಚಿಂತೆ. ತಾನು ಮಾಡಿದ ಅಪರಾಧಕ್ಕೆ ತಕ್ಕ ಶಿಕ್ಷೆ ಯಾವುದು ಕಾದಿದೆಯೋ ಎಂದು ಕಳವಳ ಪಡು ತ್ತಿದ್ದನು.

೧೫

ಗಂಡನ ಮನೆಗೆ ಹೋದ ತರುಣದಲ್ಲೇ ಮತ್ತೆ ಹಿಂತಿರುಗಿದುದು ರಾಮಸ್ವಾಮಿಗಳಿಗೆ ಬಹಳ ಆಶ್ಚರ್ಯವಾಯಿತು. ಮಗಳು ಸಾವಿತ್ರಿಯು ಅಷ್ಟು ಹರ್ಷದಿಂದ ಗಂಡನ ಮನೆಗೆ ಹೋಗಿದ್ದುದು ಕೇವಲ ಕೆಲವು ದಿನ ಗಳಾಗಿತ್ತು. ಆದರೆ ಮತ್ತೆ ಮಕ್ಕಳೊಡನೆ ಹಿಂತಿರುಗಿದುದು ಅವರಿಗೆ ಅತೀವ ಆಶ್ಚರ್ಯವಾಯಿತು. ಏನಾಗಿರಬಹುದು? "ಗಂಡನೊಡನೆ ಜಗಳವಾಡಿ ಬಂದಿರಬಹುದೆ? ಛೆ, ಹಾಗಿರಲಾರದು. ಮೊನ್ನೆತಾನೆ ನಗುತ್ತಾ ಅವನನ್ನು ಕಳುಹಿಸಿಕೊಟ್ಟಳು..........." ಮನಸ್ಸಿನಲ್ಲೇ ತಿರುವಿಹಾಕಿಕೊಳ್ಳುತ್ತಿದ್ದರು. ಏನೊಂದೂ ಇತ್ಯರ್ಥವಾಗಲಿಲ್ಲ. ಒಂದು ದಿನ ಸಾವಿತ್ರಿಯನ್ನು ಮಾತನಾಡಿ ಸಲು ಸಾಧ್ಯವಾಗಲೇ ಇಲ್ಲ. ಕೆಲವು ದಿನಗಳು ಹೋಗಲಿ ತಾನೇ ಹೇಳು ತ್ತಾಳೆ ಎಂದು ಸಮ್ಮನಾಗಿಬಿಟ್ಟರು ರಾಮಸ್ವಾಮಿಗಳು.

ಸಾವಿತ್ರಿ ಬಂದು ಆಗಲೇ ಎರಡು ದಿವಸ ಕಳೆದುಹೋಗಿತ್ತು. ಅಂದು ಮಧ್ಯಾಹ್ನ ಊಟವಾದ ಮೇಲೆ ಎಲೆ ಅಡಿಕೆ ಜಗಿಯುತ್ತಾ ತಂದೆ-ಮಗಳು

ಹೊರ ಜಗುಲಿಯ ಮೇಲೆ ಕುಳಿತಿದ್ದರು. ಅಂತೂ ಇವತ್ತು ಕೇಳಿಯೇ ಬಿಡೋಣವೆಂದು ತೀರ್ಮಾನಿಸಿದರು.

"ಏನು ಸಾತು, ಬಂದೋಳು ಒಂದು ಕಾಗದ ಬರೆದು ಬರಬಾರದಿತ್ತೆ? ಅಂತಾದ್ದು ಏನು ವಿಶೇಷ?"

ಸಾವಿತ್ರಿ ಉತ್ತರ ಕೊಡಲಿಲ್ಲ. ರಾಮಸ್ವಾಮಿಗಳಿಗೆ ಸಂದೇಹವಾಯಿತು.

"ಏನು ಸಾವಿತ್ರಿ ಅಂತಾದ್ದೇನು ನಡದದ್ದು? ನನ್ನ ಕೈಯಲ್ಲಿ ಹೇಳಬಾರದೇನು?"

ಸಾವಿತ್ರಿಯ ಕಣ್ಣಿನಲ್ಲಿ ನೀರು ಚಿಮ್ಮಿತು. ಓಡಿಬಂದವಳೇ ತಂದೆಯನ್ನು ತಬ್ಬಿದಳು. ಮಗಳ ತಲೆಯನ್ನು ನೇವರಿಸುತ್ತಾ ಸಮಾಧಾನ ಮಾಡಲೆತ್ನಿಸಿದರು. ಸಾವಿತ್ರಿ ಬಿಕ್ಕಿಬಿಕ್ಕಿ ಅಳುತ್ತಾ ಎಲ್ಲವನ್ನೂ ತಿಳಿಸಿದಳು. ರಾಧಳ ಪರಿಚಯವಾದದ್ದು, ತನ್ನ ಗಂಡನ-ರಾಧೆಯ ಸಂಬಂಧ, ತಾನು ಕಣ್ಣಾರೆ ನೋಡಿದುದು ಎಲ್ಲವನ್ನೂ ಹೇಳಿದಳು.

ರಾಮಸ್ವಾಮಿಗಳ ಕಣ್ಣಲ್ಲೂ ದುಃಖದ ಕೋಡಿ ಹರಿಯಿತು. ತಮ್ಮ ಮಗಳಿಗೆ ಇಂತಹ ಸುಖ ಪ್ರಾಪ್ತವಾಗುತ್ತದೆಂದು ಕನಸಿನಲ್ಲೂ ಕಂಡಿರಲಿಲ್ಲ.

ಶಂಕರ-ಶಾರದೆಯರನ್ನು ಸ್ಕೂಲಿಗೆ ಕಳುಹಿಸಬೇಕಾಗಿತ್ತು. ಅಂದರೆ ತಂದೆ ಮಗಳು ಬೆಂಗಳೂರಿಗೆ ಪ್ರಯಾಣ ಮಾಡಬೇಕೆಂದು ತೀರ್ಮಾನ ಮಾಡಿಕೊಂಡರು.

## ೧೩

ಬೆಂಗಳೂರು ದೊಡ್ಡ ಪಟ್ಟಣ. ಜನ ಜಂಗುಳಿ ತಾನೇತಾನಾಗಿ ನೆಲಸಿರುವ ಊರು. ಶಂಕರ ಮತ್ತು ಶಾರದೆಯರನ್ನು ಯಾವುದಾದರೂ

ಮನೆಗೆ ಹತ್ತಿರವಿರುವ ಸ್ಕೂಲಿಗೆ ಸೇರಿಸಬೇಕೆಂದು ರಾಮುಸ್ವಾಮಿಗಳು ಓಡಾಡಿದರು. ಶಂಕರನಿಗೆ ಆಗ ಹದಿಮೂರು ವರ್ಷ. ಮನೆ ಮಲ್ಲೇಶ್ವರದಲ್ಲಿನ ಒಂದು ಸಣ್ಣ ಬಂಗಲೆಯಲ್ಲಿ ಬಾಡಿಗೆಗೆ ದೊರೆಯಿತು. ಎಲ್ಲಾ ವಿಧದಲ್ಲೂ ಮನೆ ಅನುಕೂಲವಾಗಿತ್ತು. ಶಂಕರ ಮತ್ತು ಶಾರದೆಯರನ್ನು ಸ್ಕೂಲಿಗೆ ಸೇರಿಸಿಯೂ ಆಯಿತು. ಮನೆಯ ಬಳಿಯೇ ಸ್ಕೂಲು. ಅವರೆಲ್ಲರಿಗೂ ಬೆಂಗಳೂರು ಹೊಸ ಊರಾಗಿತ್ತು. ದಿನವೂ ಒಂದೊಂದು ಹೊಸ ಜಾಗ ಕಲಿತು ನೋಡಿಕೊಂಡು ಬರುತ್ತಾ ಬಂದರು.

ಶಂಕರ ಓದಿನಲ್ಲಿ ಎಲ್ಲ ಹುಡುಗರನ್ನೂ ಮೀರಿಸುತ್ತಿದ್ದ. ಅವನ ಜಾಣ್ಮೆಗೆ ಎಲ್ಲರೂ ಮರುಳಾಗುತ್ತಿದ್ದರು. ಕೆಲವರು ಹುಡುಗರಂತೂ ಶಂಕರನನ್ನೇ ತಮ್ಮ ದಳದ ಮುಂದಾಳಾಗಲು ಆಶಿಸುತ್ತಿದ್ದರು. ಅವನ ದಯಾಸ್ವಭಾವ, ಬುದ್ಧಿ, ಚುರುಕುತನ ಮತ್ತು ಮಾತನಾಡುವ ಶೈಲಿ ಎಲ್ಲರನ್ನೂ ಆಕರ್ಷಿಸುತ್ತಿತ್ತು. ಶಂಕರ–ಶಾರದೆ ಒಬ್ಬರಿಗೊಬ್ಬರು ಅನ್ಯೋನ್ಯವಾಗಿ ಇದ್ದರು. ತಂದೆಯ ಹಿತವಚನ ಕೇಳುವ ಭಾಗ್ಯವು ಈ ಮಕ್ಕಳಿಗೆ ಇಲ್ಲವಾಯಿತಲ್ಲಾ ಎಂಬುದೇ ಸಾವಿತ್ರಿಯ ಕೊರಗು.

ಶ್ರೀನಿವಾಸಯ್ಯನನ್ನು ಬಿಟ್ಟು ಸಾವಿತ್ರಿ ಹೊರಟು ಬಂದು ಆಗಲೆ ಎರಡು ತಿಂಗಳಾಗಿ ಹೋಯಿತು. ತಾನು ಊರಿಗೆ ಮರಳಿ ಬಂದ ಮೇಲೆ ತನಗೆ ಕಾಗದವನ್ನಾದರೂ ಬರೆಯುವರು ಎಂಬ ಒಣ ನಂಬಿಕೆ ಸಾವಿತ್ರಿಗಿತ್ತು. ಆದರೆ ಎಷ್ಟೋ ದಿನಗಳು ಉರುಳಿಹೋಯಿತು. ಮತ್ತೆ ಗಂಡನಿಂದ ಸಮಾಚಾರ ವೊಂದೂ ತಿಳಿಯಲಿಲ್ಲ. ಹೋಗಲಿ, ಕ್ಷಮಾಪಣೆ ಕೇಳುವಂತಹ ಒಂದು ಪತ್ರವನ್ನಾದರೂ ಕೂಡ ಬರೆದಿರಲಿಲ್ಲ. ಅಂತಹ ನಿಷ್ಕರುಣೆಯೇ ಅವರಿಗೆ? ನನ್ನ ಮೇಲೆ ಅವರಿಗೆ ಕೋಪವಾದರೂ ಯಾಕೆ?

ದಿವಸಗಳು ಒಂದರಂತೆ ಕಳೆದುಹೋಯಿತು. ಗಂಡನಿಂದ ಒಂದು ಕ್ಷೇಮಸಮಾಚಾರ ಪತ್ರವೂ ಬರಲಿಲ್ಲ. ನನ್ನನ್ನು ಕಂಡರೆ ಅವರಿಗೆ ಇಷ್ಟವಿಲ್ಲ...... ನನ್ನ ಮೇಲೆ ಅವರಿಗೆ ಖಂಡಿತ ಪ್ರೀತಿಯಿಲ್ಲ. ಸಾವಿತ್ರಿ ಯೋಚಿಸಿ ಯೋಚಿಸಿ ನಿಟ್ಟುಸಿರು ಬಿಡುತ್ತಿದ್ದಳು. ಒಂದೊಂದು ಬಾರಿ ತಾನೇ ಅಂದುಕೊಳ್ಳುವಳು.

"ನಾನೇ ಅವರಿಗೆ ಏಕೆ ಕಾಗದವನ್ನು ಬರೆಯಬಾರದು?" ಮತ್ತೊಮ್ಮೆ ಮನಸ್ಸು ಗಟ್ಟಿಯಾಗುತಿತ್ತು. "ನಾನು ಅವರಿಗೆ ಬರೆಯುವುದೇ! ಖಂಡಿತ ಕೂಡದು. ನಾನು ಅವರನ್ನು ಬೇಡಬೇಕಾದರೂ ಯಾತಕ್ಕೆ? ನಾನು ಮಾಡಿರುವ ತಪ್ಪಾದರೂ ಏನು? ನನ್ನ ಮೇಲೆ ಪ್ರೀತಿ ಇಲ್ಲದಿದ್ದಕ್ಕೆ ಅಲ್ಲವೇ ಅವರು ನನಗೆ ಪತ್ರವೊಂದೂ ಬರೆಯಲಿಲ್ಲ."

ಅಂತೂ ಸಾವಿತ್ರಿಯ ಮನಸ್ಸು ಯಾವಾಗಲೂ ತೂಗುವ ಉಯ್ಯಾಲೆಯಂತೆ ಅಲ್ಲಿಂದ-ಇಲ್ಲಿಗೆ, ಇಲ್ಲಿಂದ-ಅಲ್ಲಿಗೆ ತೂಗುತಿತ್ತು.

ಕಡೆಗೆ ಒಂದು ತೀರ್ಮಾನಕ್ಕೆ ಬಂದಳು. ತಾನೇ ಒಂದು ಕಾಗದ ಬರೆಯಬೇಕೆಂದು, ಅಂದೇ ಒಂದು ಕಾಗದವನ್ನು ಬರೆದುಬಿಟ್ಟಳು. ಮಾರನೆಯ ದಿನವೇ ಶ್ರೀನಿವಾಸಯ್ಯನಿಗೆ ಕಾಗದ ತಲುಪಿತು. ಒಡೆದು ಓದಿಕೊಂಡನು. ಕಾಗದವಲ್ಲಿ ವಿಶೇಷವೇನೂ ಇರಲಿಲ್ಲ. ಬರೀ ಕ್ಷೇಮ ಸಮಾಚಾರ ಮಾತ್ರ. ಓದಿ ಶ್ರೀನಿವಾಸಯ್ಯ ನಕ್ಕುಬಿಟ್ಟ. ಅದಕ್ಕೆ ಅವನು ಉತ್ತರ ಬರೆಯುವ ಕಷ್ಟಕ್ಕೆ ಹೋಗಲಿಲ್ಲ.

ಉತ್ತರಕ್ಕಾಗಿ ಸಾವಿತ್ರಿ ಕಾದು ನೋಡಿದಳು. ಕಡೆಗೆ ಬೇಸತ್ತಳು. ತಾನು ಬರೆದ ಕಾಗದಕ್ಕೆ ಬೆಲೆಯಿಲ್ಲದಿದ್ದ ಮೇಲೆ ತನ್ನನ್ನು ಕಂಡರೆ ಇನ್ನೆಷ್ಟು ಪ್ರೀತಿ ಇರಬೇಕು ಅವರಿಗೆ? ಸಾವಿತ್ರಿಯ ಮನಸ್ಸು ವಜ್ರದಂತೆ ಗಟ್ಟಿಯಾಯಿತು. ಮತ್ತೆಂದೂ ಅವರ ಮುಖಾವಲೋಕನವನ್ನೂ ಮಾಡಬಾರದೆಂದು ಇತ್ಯರ್ಥ ಮಾಡಿಕೊಂಡಳು. ಮುದ್ದು ಮಕ್ಕಳ ಮುಖಗಳನ್ನು ನೋಡಿಕೊಂಡು ಪತಿಯನ್ನು ಮರೆಯಲು ಪ್ರಯತ್ನಿಸಿದಳು.

## ೧೭

ಶಶಿಧರ ಹೈಸ್ಕೂಲಿನಲ್ಲಿ ಓದುತ್ತಿದ್ದ. ಸ್ಕೂಲಿನಲ್ಲಿ ಅಲಂಕಾರ ವಿದ್ಯಾರ್ಥಿಯೆಂದು ಹೆಸರು ಪಡೆದಿದ್ದ. ಅವನು ಧರಿಸುತ್ತಿದ್ದ ಬಟ್ಟೆಗಳು, ನಡೆಯುತ್ತಿದ್ದ

ಠೀವಿ ಎಲ್ಲರನ್ನೂ ಆಶ್ಚರ್ಯಗೊಳಿಸುತಿತ್ತು. ಅವನಿಗೆ ಉಲ್ಲನ್ ಪ್ಯಾಂಟ್‌ಗಳೇ ಆಗಬೇಕು, ಕಾಲಿಗೆ ಷೂಸ್‌ಗಳೇ ಆಗಬೇಕು. ಆವನು ನೋಡದ ನಾಟಕ-ಸಿನಿಮಾಗಳಿಲ್ಲ. ಆಡದ ಆಟಗಳಿರಲಿಲ್ಲ. ರುಚಿ ನೋಡದ ಹೋಟಲುಗಳಿರಲಿಲ್ಲ.

ಎಲ್ಲಾ ಖರ್ಚಿಗೂ ಅಕ್ಕ-ರಾಧಳನ್ನು ಕೇಳುತ್ತಿದ್ದನು. ಅವಳಿಂದ ಶ್ರೀನಿವಾಸಯ್ಯನಿಗೆ ತಂತಿ ವರ್ತಮಾನ. ಹೆಂಡತಿ ಎಂಬ ಅಭಿಮಾನ ರಾಧಳಲ್ಲಿ. ಅವಳು ಏನು ಹೇಳಿದರೂ ಅದನ್ನು ಕೂಡಲೆ ನೆರವೇರಿಸುತ್ತಿದ್ದನು.

ಎಷ್ಟೋ ಬಾರಿ ರಾಧಳ ಮೇಲೆ ಅವನಿಗೆ ಜುಗುಪ್ಸೆಯಾಗುತಿತ್ತು. ಆದರೆ ಕೂಡಲೆ ಅವಳ ಮನಮೋಹಕ ರೂಪು ಅವನ ಮುಂದೆ ಸುಳಿಯುತಿತ್ತು. ಕಾದ ಮರಳಿನ ಮೇಲೆ ತಂಪಾದ ಮಳೆ ಸುರಿದಂತಾಗುತಿತ್ತು. ಅವಳನ್ನು ಬಿಡಲಾರದೆ, ಅವಳ ಮನಸ್ಸು ಸಂತವಿಸಲು ಎಲ್ಲವನ್ನೂ ನೆರವೇರಿಸುತ್ತಿದ್ದನು.

ಶಶಿಧರನ ಕೆಲವು ಸ್ನೇಹಿತರುಗಳು ಮನೆಯಲ್ಲಿ ಮೇಷ್ಟರುಗಳನ್ನು ಇಟ್ಟು ಕೊಂಡು ಪಾಠವೇಳಿಕೊಳ್ಳಿಸುತ್ತಿದ್ದರು. ಅದೊಂದು ಶ್ರೀಮಂತಿಕೆ. ಅದ ರಂತೆ ಶಶಿಧರ, ಅಕ್ಕ-ರಾಧಳನ್ನು ಕೇಳಿದ.

"ಅಕ್ಕಾ, ಇನ್ನು ಮೇಲೆ ನನಗೆ ಒಬ್ಬರು ಮೇಷ್ಟರನ್ನು ಇಡಿಸು" ಎಂದನು.

ರಾಧೆಗೆ ಸಂತೋಷವಾಯಿತು. ಅಂತೂ ತಮ್ಮನಿಗೆ ವಿಧ್ಯೆ ಕಲಿಯಲು ಇಷ್ಟವಿರಬಹುದು. ಅದಕ್ಕೆ ಅವನು ಹಾಗೆ ಕೇಳುತ್ತಿರುವುದು ಎಂದು ಕೊಂಡಳು.

ಅದರಂತೆ ಶ್ರೀನಿವಾಸಯ್ಯನವರೂ ಒಪ್ಪಿಕೊಳ್ಳಬೇಕಾಯಿತು. ಮೇಷ್ಟರಿಗಾಗಿ ಅವರು ಹುಡುಕಲಾರಂಭಿಸಿದರು. ಶಶಿಧರನ ಸ್ಕೂಲಿನಲ್ಲಿ ಒಬ್ಬ ಮೇಷ್ಟರು ಇದ್ದರು. ಹೆಸರು ಶೇಷಗಿರಿ ಎಂದು. ಒಳ್ಳೆಯವರೇ. ಶಶಿಧರ ಅವರನ್ನು ಮನೆಗೆ ಕರೆದುಕೊಂಡುಬಂದನು. ಶ್ರೀನಿವಾಸಯ್ಯ ಮಾತನಾಡಿ

ಅವರನ್ನೇ ಒಪ್ಪಿಕೊಂಡ. ನಂತರ ತಿಂಗಳಿಗೆ ಹತ್ತು ರೂಪಾಯಿಗಳಂತೆ ಶೇಷಗಿರಿ ಒಪ್ಪಿಕೊಂಡರು.

ಪ್ರತಿ ದಿವಸ ಸಾಯಂಕಾಲ ಪಾಠಕ್ಕೆ ಮೇಷ್ಟರು ಬಂದು, ಪಾಠ ಹೇಳಿ ಕೊಟ್ಟು ಹೋಗುತ್ತಿದ್ದರು.

ಆಗಲೆ ಎರಡು–ಮೂರು ತಿಂಗಳು ಕಳೆದು ಹೋಯಿತು. ಶೇಷಗಿರಿಗೆ ಮನೆಯಲ್ಲಿ ಎಲ್ಲರಿಗೂ ಸಲಿಗೆಯಾಯಿತು.

ಆಫೀಸಿನಲ್ಲಿ ಶ್ರೀನಿವಾಸಯ್ಯನಿಗೆ ಕೆಲಸ ಜಾಸ್ತಿ ಮಾಡಲು ಷುರು ಮಾಡಿದ. 'ಓವರ್–ಟೈಮ್' ಮಾಡಿದರೆ ಜಾಸ್ತಿ ದುಡ್ಡು ಸಂಪಾದಿಸ ಬಹುದು ಎಂದುಕೊಂಡನು. ಸಂಸಾರದ ಖರ್ಚು ಜಾಸ್ತಿಯಾಗುತ್ತಾ ಬಂತು, ದುಂದು ವೆಚ್ಚ, ದಿವಸ ದಿವಸಕ್ಕೆ ಹೆಚ್ಚಾಗಿ ಬೆಳೆಯುತಿತ್ತು. ಇರುವುದು ಕೇವಲ ಮೂವರಾದರೂ ಸಹ ಬಂದ ಸಂಬಳ ಪೂರ್ತಿಯಾಗಿ ಮುಗಿದು ಹೋಗುತಿತ್ತು. ಹೆಚ್ಚಾಗಿ ಬೇಕಾಗಿದ್ದಲ್ಲಿ ಸಾಲ ಮಾಡಬೇಕಾಗಿತ್ತು. ಹೆಂಡ ತಿಯ ಕರುಳಿಗೂ ಕಟ್ಟಿಕೊಂಡವಳ ಕರುಳಿಗೂ ಎಷ್ಟೋ ಅಂತರ. ಎಷ್ಟು ಕಷ್ಟಪಟ್ಟು ಸಂಪಾದನೆ ಮಾಡಿದರೂ ಸುಖ ಕಾಣದಾಯಿತು. ಮೊದ ಮೊದಲು ಸಂತೋಷವಾಗಿ ಆಹ್ವಾನಿಸುತ್ತಿದ್ದ ರಾಧ ಈಗ ಅವನೆಂದರೆ ಜುಗುಪ್ಸೆ. ಏನೋ ಒಂದು ತರಹ ಬೇಸರ. ಶ್ರೀನಿವಾಸಯ್ಯನಿಗೆ ಆದಷ್ಟು ತೀರ ದೂರವಾಗತೊಡಗಿದಳು ರಾಧ. ತಿಳಿದು ತಿಳಿದೂ ಶ್ರೀನಿವಾಸಯ್ಯ ಹುಲಿಗೆ ಎದುರಿದ ಇಲಿಯಂತೆ ತೆಪ್ಪಗಾದನು. ಒಂದು ಮಾತೂ ಆಡುತ್ತಿರಲಿಲ್ಲ. ಗಾಣದ ಎತ್ತಿನಂತೆ ದುಡಿದು ತಂದುಕೊಡುತ್ತಿದ್ದನು ದುಡ್ಡನ್ನು. ಅದು ರಾಧಳ ಕಣ್ಣಿಗೆ ಕಸಕ್ಕಿಂತಲೂ ಕಡೆಯಂತೆ ಕಾಣಲಾರಂಭಿಸಿತ್ತು.

೧೮

ಶೇಷಗಿರಿ ದಿನ ದಿನಕ್ಕೆ ಹೊಸ ಮಾದರಿ ಯುವಕನಂತೆ ಮಾರ್ಪಡು ತ್ತಿದ್ದನು. ತಂದೆ ತಾಯಿಗಳು ಯಾವುದೋ 'ಹೊಸ ನಗರ'ದಲ್ಲಿ ಇದ್ದರು.

ಇವನು ಮಾತ್ರ ಬೆಂಗಳೂರಿನಲ್ಲಿ ಓದಿ, ಅಲ್ಲೇ ಹೈಸ್ಕೂಲ್‌ನಲ್ಲಿ ಉಪಾಧ್ಯಾಯನಾಗಿದ್ದನು. ತಿಂಗಳಿಗೆ ಅವನಿಗೆ ನೂರೈವತ್ತು ರೂಪಾಯಿ ತನಕ ಸಂಬಳ ಮತ್ತು ಸಂಪಾದನೆ ಬರುತ್ತಿತು. ಅವನಿಗೆ ಇನ್ನೂ ಮದುವೆಯಾಗಿರಲಿಲ್ಲ. ಶೇಷಾದ್ರಿಪುರದಲ್ಲಿ ಯಾವುದೋ ರೂಮಿನಲ್ಲಿದ್ದನು. ಹೇಳುವವರು ಕೇಳುವವರು ಯಾರೂ ಇರಲಿಲ್ಲ.

ಶಶಿಧರನಿಗೆ ಪಾಠ ಹೇಳಲು ಬಂದಾಗ ಕಣ್ಣನ್ನು ಅತ್ತಿತ್ತ ಹೊರಳಿಸದೆ ಪಾಠ ಹೇಳಲು ಮಗ್ನನಾಗುತ್ತಿದ್ದ. ತನ್ನ ಪಾಡಿಗೆ ತಾನು, ಎಷ್ಟು ಕೆಲಸವೊ ಅಷ್ಟು ಮಾಡಿಕೊಂಡು ಬೇರೆ ವಿಷಯಗಳ ಗೊಡವೆಗೆ ಹೋಗದೆ ಸುಮ್ಮನೆ ಹೊರಟುಹೋಗುತ್ತಿದ್ದ. ದಿನವೂ ರಾಧ ಇದನ್ನು ನೋಡುತ್ತಿದ್ದಳು. ಬರುಬರುತ್ತಾ ಶೇಷಗಿರಿ ಸಮಾಚಾರಗಳನ್ನು ಕೇಳುತ್ತಾ ಇದ್ದಳು. ಶಶಿಧರ ಎಲ್ಲವನ್ನು ಕೇಳಿ ಹೇಳುತ್ತಿದ್ದ. ಶೇಶಗಿರಿಯನ್ನು ನೋಡಿದಂತೆಲ್ಲಾ ರಾಧಳಿಗೆ ಏನೋ ಉತ್ಸಾಹ, ಸಂತೋಷ. ಅವನು ಪಾಠಕ್ಕೆ ಬರುವಾಗಲೆಲ್ಲಾ, ರಾಧ ಬೇಕೆಂದೇ ಹೊರಗೆ ಹೋಗಿ ಕುಳಿತುಕೊಳ್ಳುತ್ತಿದ್ದಳು. ಶೇಷಗಿರಿ ಎಷೋ ಬಾರಿ ನೋಡಿದ್ದನು. ಆದರೆ ನೆಟ್ಟ ನೋಟದಿಂದ ನೋಡುವಷ್ಟು ತಾಳ್ಮೆ ಅವನಲ್ಲಿರಲಿಲ್ಲ.

ತಿಂಗಳ ಮೊದಲನೆಯ ದಿನ. ಅವನಿಗೆ ಸಂಬಳ ಕೊಡುವ ದಿನ. ಶೇಷಗಿರಿ ಮನೆಯೊಳಗೆ ಬಂದನು. ಅದೇ ಹೊತ್ತಿಗೆ ಶಶಿಧರ ಮನೆಯಲ್ಲಿರಲಿಲ್ಲ. ಇದ್ದವಳೊಬ್ಬಳೇ ರಾಧ. ಶೇಷಗಿರಿ ನೇರ ಒಳಗೆ ಹೋದವನೇ ಕುರ್ಚಿಯ ಮೇಲೆ ಕುಳಿತನು. ರಾಧ ಹಿಂದೆಯೇ ಬಂದಳು. ಬಂದವಳೇ ಅವನ ಮುಂದೆ ಇದ್ದ ಕುರ್ಚಿಗೆ ಆತು ನಿಂತುಕೊಂಡಳು. ಮಾತಿಗಾರಂಬಿಸಿದಳ..

"ಹೇಗಿದ್ದಾನೆ ನಮ್ಮ ಶಶಿ? ಚೆನ್ನಾಗಿ ಓದುತ್ತಾನೆಯೆ?"

ಶೇಷಗಿರಿ ತಲೆ ತಗ್ಗಿಸಿಯೇ ಉತ್ತರ ಕೊಟ್ಟ

"ಹುಂ."

"ನೀವು ವಾಸವಾಗಿರುವುದೆಲ್ಲಿ?"

"ಇಲ್ಲೇ, ಶೇಷಾದ್ರಿಪುರದಲ್ಲಿ."

"ನಮ್ಮ ಶಶಿ ಸ್ಕೂಲಿನಲ್ಲಿ ನೀವು ಮೇಷ್ಟರಂತೆ!"

"ಹೌದು"

ಶೇಷಗಿರಿ ತಲೆ ಎತ್ತಿದ. ಎದುರಿಗೆ ರಾಧ ನೆಟ್ಟ ನೋಟದಿಂದ ನೋಡುತ್ತಿದ್ದಳು. ಆ ನೋಟ ಅವನನ್ನು ಎತ್ತರದ ಗೋಪುರದಿಂದ ಕೆಳಗೆ ನೂಕಿಸುವ ಶಕ್ತಿಯಾಗಿತ್ತು. ಆ ನೋಟವನ್ನು ಎದುರಿಸಲಾರದೆ ಹೋದನು. ರಾಧ ಒಂದು ಕಾಲನ್ನು ಕುರ್ಚಿಯ ಮೇಲಿಟ್ಟು ಕುಳಿತಳು. ಅವಳ ಹಲ್ಲುಗಳು ಎಡಕೈಯ ಕಿರು ಬೆರಳ ಉಗುರನ್ನು ಕಚ್ಚುತ್ತಿತ್ತು. ಸೆರಗು ಗಾಳಿಗೆ ಅರ್ಧ ಜಾರಿತ್ತು. ಇವೆಲ್ಲವನ್ನು ನೋಡಿವದನೇ ಶೇಷಗಿರಿ ತಣ್ಣಗಾದಂತೆಯೇ, ಅವನ ಮೈಯೆಲ್ಲಾ ಬೆವತುಹೋಗಿತ್ತು. ಯಾವುದೋ ಶಕ್ತಿ ಅವನನ್ನು ಕತ್ತೆತ್ತಿ ನಿಲ್ಲುವಂತೆ ಪ್ರೇರೇಪಿಸುತ್ತಿತ್ತು. ಆದರೆ ಅವನಿಗೆ ಹೆದರಿಕೆ–ಅನುಮಾನ. ಶೇಷಗಿರಿ ಅಲ್ಲಿ ಕುಳಿತಿದ್ದವನು ಹೊರಗೆ ಹೋಗಲು ಎದ್ದು ನಿಂತನು. ಎದ್ದವನೇ ಬಾಗಿಲ ಬಳಿ ನಡೆದನು. ಇದೆಲ್ಲವನ್ನೂ ಊಹಿಸಿದ್ದ ರಾಧ ಮುಂದೋಡಿ ಬಂದಳು. ಬಾಗಿಲಿಗೆ ಅಡ್ಡವಾಗಿ ನಿಂತಳು. ಮುಗುಳ್ನಗೆ ನಕ್ಕಳು. ಶೇಷಗಿರಿಗೆ ಏನೂ ತೋಚದಾಯಿತು. ತಡೆಯಲು ಹೋಗಿದ್ದ ಅವನ ಎಡಕೈ ಹೇಗೋ ಅವಳನ್ನು ಸುತ್ತುಗಟ್ಟಿತು. ಪರಸ್ಪರ ಮುಗುಳ್ನಗೆ ನಕ್ಕರು. ಹಾಗೆಯೇ ಒಳಗೆ ನಡೆದರು.

## ೧೯

ಅಂದಿನಿಂದ ಹೊರಗಿನವನಾಗಿದ್ದ ಶೇಷಗಿರಿ ಒಳಗಿನವನೂ ಆದ. ದಿನವೂ ರಾಧ-ಶೇಷಗಿರಿಯರ ಭೇಟಿ ಆಗುತ್ತಲಿತ್ತು. ಎರಡು

ತಿಂಗಳೂ ಕಳೆಯಿತು. ರಾಧಳ ಮನಸ್ಸಂತೋಷಾರ್ಥವಾಗಿ ಶೇಷಗಿರಿ ಇದು ವರೆಗೆ ಕೂಡಿಟ್ಟಿದ್ದ ಹಣದಿಂದ ಬಂಗಾರದ ಸರವನ್ನು ಮಾಡಿಸಿ ತಂದನು. ರಾಧ ಅದನ್ನು ನೋಡಿದವಳೇ ಅವನನ್ನು ಕೊಂಡಾಡಿದಳು.

ತಿಂಗಳ ಸಂಬಳವೂ ರಾಧಳ ಕೈ ಸೇರುತ್ತಿತ್ತು. ಅವಳು ನಕ್ಕರೆ ಅವನಿಗೆ ಸ್ವರ್ಗಕ್ಕೇರಿದಂತಾಗುತಿತ್ತು. ಆ ಮಂದಹಾಸದ ವದನವನ್ನು ಕಾಣಲು ಏನು ಮಾಡಲೂ ಸಿದ್ಧನಾಗಿದ್ದನು.

ಶ್ರೀನಿವಾಸಯ್ಯಗೆ ರಾಧಳಲ್ಲಿ ಏನೋ ಸಂದೇಹ ತಲೆದೋರುತಿತ್ತು. ಹೊಸ ಹೊಸ ಆಭರಣಗಳು, ದಿನದಿನಕ್ಕೆ ಉಡುತ್ತಿದ್ದ ಸೀರೆಗಳು ಇವನನ್ನು ಹುಚ್ಚನನ್ನಾಗಿಸಿತ್ತು. "ಅವುಗಳು ಇವಳಿಗೆ ದೊರೆಯುವ ಬಗೆಯಾದರೂ ಹೇಗೆ?" ಎಂಬುದೇ ಅವನಿಗೆ ಶಂಕೆ. ತಾನೆಂದೂ ಅಷ್ಟು ದುಡ್ಡು ಕೊಟ್ಟಿರ ಲಿಲ್ಲ. ಎಲ್ಲಿಂದ ಬಂತು ಎಂದು ಹೇಗೆ ಕೇಳುವುದು? ಅವಳಿಗೆ ಅಷ್ಟೊಂದು ಬೆಲೆ ಬಾಳುವ ವಸ್ತುಗಳು ಬರುವ ರೀತಿ ಯಾವುದು? ತಾನೇನೂ ಅಷ್ಟು ಬೆಲೆ ಬಾಳುವ ವಸ್ತುಗಳನ್ನು ಕೊಳ್ಳುವಂತಹ ಸಾಹುಕಾರನಲ್ಲ.

ಎಷ್ಟೋ ಬಾರಿ ರಾಧ ಶ್ರೀನಿವಾಸಯ್ಯನ ಮನಸ್ಸಿನಲ್ಲಿ ನಡೆಯುತ್ತಲಿದ್ದ ಆಂದೋಳನವನ್ನು ದೃಷ್ಟಿಸಿ ಸುಮ್ಮನಾಗುತ್ತಿದ್ದಳು.

ಅವಳಿಗೆ ಶ್ರೀಮಂತಿಕೆ ಬೇಕಾಗಿತ್ತು. ಹಣದ ಸಮುದ್ರದಲ್ಲಿ ತೇಲಿ ಮುಳುಗಬೇಕಿತ್ತು. ಆದರೆ ಅಂತಹುಗಳನ್ನು ಕೊಡುವವನು ಶ್ರೀನಿವಾಸಯ್ಯ ನಲ್ಲ. ಅವನೊಬ್ಬ ದಟ್ಟದರಿದ್ರ ಮನುಷ್ಯ. ಅವನನ್ನು ಕಂಡಾಗಲೆಲ್ಲಾ ಅತೃಪ್ತಿಯ ನಿರಾಶೆ ಅವಳಲ್ಲಿ ಉದ್ಭವವಾಗುತಿತ್ತು. 'ಇದೊಂದು ಪ್ರಾಣಿ' ಎಂದುಕೊಂಡು ಸುಮ್ಮನಾಗುತ್ತಿದ್ದಳು.

ಶೇಷಗಿರಿಯ ಆಗಮನ ಅವಳ ಜೀವನದಲ್ಲಿ ಹೊಸ ಉತ್ಸಾಹವನ್ನು ಕೊಟ್ಟಿತ್ತು. ಪಾಳುಬಿದ್ದಹಾಗೆ ಕಾಣುತ್ತಿದ್ದ ಉದ್ಯಾನವನದಲ್ಲಿ ವಸಂತನ ಆಗಮನವಾದಂತಾಯಿತು. ಶೇಷಗಿರಿಯನ್ನು ಕಂಡಾಗಲೆಲ್ಲಾ ಅವಳಿಗೆ ಆಸೆ, ಆಕಾಂಕ್ಷೆ ತುಂಬಿ ತುಳುಕುತಿತ್ತು. ಶೇಷಗಿರಿಯು ಹಾಕುತ್ತಿದ್ದ ಬೆಲೆ ಬಾಳುವ

ಉಡುಪುಗಳು ಮತ್ತು ಅವನ ಠೀವಿಯನ್ನು ಕಂಡರೆ ಅವನೊಬ್ಬ ಶ್ರೀಮಂತ ನೆಂದು ತೋರಿಸುತ್ತಲಿತ್ತು, 'ಅವನು ತನ್ನವನಾದರೆ!' ಎಂದು ಯೋಚಿಸಿ ದಳು. ನಿಜವಾಗಿಯೂ ಅವಳಿಗೆ ಕನಸು ನನಸಾಗುವುದು ಎಂಬ ನಂಬಿಕೆ.

ಶೇಷಗಿರಿ ಶ್ರೀನಿವಾಸಯ್ಯನಿಗಿಂತಲೂ ಕಿರಿಯವನು. ಹರಿಯದ ಯುವಕ. ಅವನು ನೋಡಲು ಆಕರ್ಷಕ ವ್ಯಕ್ತಿಯಾಗಿದ್ದನು. ರಾಧ ಅವ ನನ್ನು ಮನಸಾರೆ ಮೆಚ್ಚಿದ್ದಳು. ಅವನ ರೂಪಿಗಾಗಿ ಮತ್ತು ಅವನ ಹಣಕ್ಕಾಗಿ.

ಶೇಷಗಿರಿಯನ್ನು ಹೇಗಾದರೂಮಾಡಿ ಕಡೆಯವರೆಗೆ ತನ್ನವನನ್ನಾಗಿ ಮಾಡಿಕೊಂಡರೆ ತೀರಿತು.

ಯೋಚನಾತರಂಗದಲ್ಲಿ ತೇಲಿ ಮುಳುಗುತ್ತಿರುವಾಗಲೇ ಶೇಷಗಿರಿ ಒಳಗೆ ಬಂದ.

ಶೇಷಗಿರಿಯನ್ನು ಕಂಡಕೂಡಲೆ ರಾಧ ಎದ್ದು ನಗುಮುಖದೊಂದಿಗೆ ಸ್ವಾಗತವಿತ್ತಳು. ಅವಳ ಹಲ್ಲುಗಳು ಬೆಳಗುತ್ತಿದ್ದ ಬೆಳದಿಂಗಳಿನಂತಹ ಮಂದ ಹಾಸದ ಪ್ರತಿಭೆ ಅವನನ್ನು ಮೂಖನನ್ನಾಗಿರಿಸಿತ್ತು. ಇಂದು ಹೇಗಾದರೂ ಮಾಡಿ ಶೇಷಗಿರಿಯನ್ನು ಪೂರ್ತಿ ತನ್ನ ಬಲೆಗೆ ಹಾಕಿ ಎಳೆದು ಮುಚ್ಚಿಬಿಡ ಬೇಕೆಂದು ತೀರ್ಮಾನಿಸಿಕೊಂಡಳು.

"ಏನು ರಾಧ, ಮನೆಯಲ್ಲಿ ಯಾರೂ ಇಲ್ಲವೆ? ಶಶಿ ಎಲ್ಲಿ?" ಎಂದು ಕೇಳಿದ ಶೇಷಗಿರಿ.

"ಮನೆಯಲ್ಲಿ ಮತ್ತೆ ಬರುವರಾದರೂ ಯಾರು ಹೇಳಿ. ಶಶಿ ಈಗತಾನೆ ಹೊರಗೆ ಹೋದ. ಅದೇಕೆ ಇಂದು ಇಷ್ಟು ತಡ ಮಾಡಿದಿರಿ?"

ಶೇಷಗಿರಿ ಕೈಯಲ್ಲಿದ್ದ ಗಡಿಯಾರದ ಕಡೆಗೆ ನೋಡುತ್ತಾ,

"ಹೌದು ರಾಧ ಆಗಲೆ ಎಂಟು ಘಂಟೆಗೆ ಸಮೀಪವಾಗುತ್ತಿದೆ. ಅವರೇನಾದರೂ ಬರುವರೆ?"

ಶೇಷಗಿರಿಯ ಮನಸ್ಸನ್ನು ತಿಳಿದು ರಾಧ,

"ಅವರೇ ?......ಖಂಡಿತ ಇಷ್ಟು ಜಾಗ್ರತೆ ಬರುವುದಿಲ್ಲ."

ಮನಸ್ಸಿನಲ್ಲಿ ಏನೋ ಧೈರ್ಯಮಾಡಿ ಹತ್ತಿರ ಬಂದು ಹೇಳಿದ.

"ಎಲ್ಲಿ ರಾಧ ಸ್ವಲ್ಪ ಕಣ್ಣು ಮುಚ್ಚು."

"ಏಕೆ ?"

"ಏನೋ ಒಂದು ವಸ್ತು ತಂದಿದ್ದೇನೆ. ಅದನ್ನು ನಿನಗೆ ಹಾಕುವೆನು."

ಕೂಡಲೆ ರಾಧ ಅರ್ಧ ಕಣ್ಣು ಮುಚ್ಚಿದಳು.

ಅವಳ ಕೊರಳಿಗೆ ತನ್ನ ಕೈ ಸೋಕದಂತೆ ಎಚ್ಚರವಾಗಿ ತಾನು ತಂದಿದ್ದ ಚಿನ್ನದ ಸರವನ್ನು ಅವಳಿಗೆ ಹಾಕಿದನು.

ರಾಧ ಕೂಡಲೆ ಕಣ್ಣು ಬಿಟ್ಟು,

"ಇದು ಎಲ್ಲಿಯದು ರೀ....ಎಷ್ಟು ಚೆನ್ನಾಗಿದೆ ಸರ ?"

"ಎಲ್ಲಿಂದ ಬರುತ್ತೆ ಹೇಳು....ಕೊಂಡು ತಂದೆ"

"ಹೌದೆ ? ಹಾಗಾದರೆ ಎಷ್ಟು ಕೊಟ್ಟರಿ ?"

"ಆರುನೂರು ಇಪ್ಪತ್ತು ರೂಪಾಯಿಗಳು"

"ಅಷ್ಟೊಂದು ಬೆಲೆಯದ್ದೆ !" ರಾಧ ದಿಗ್ಭ್ರಮೆಗೊಂಡಳು.

ಶೇಷಗಿರಿ ಹತ್ತಿರ ಬಂದು ಹೇಳಿದ,

"ಹೌದು ರಾಧ. ನಿನಗಾಗಿ....ನಿನ್ನ ಮೇಲಿನ ಪ್ರೀತಿಗಾಗಿ ಕೊಂಡು ತಂದೆ. ನಿನಗಲ್ಲದೆ ನಾನು ಯಾರಿಗೆ ಕೊಡಬೇಕು ಹೇಳು ?"

ರಾಧ ತನ್ನ ಎರಡು ಕೋಮಲ ಕೈಗಳನ್ನು ಶೇಷಗಿರಿಯ ಕೊರಳಿಗೆ ಹಾರದಂತೆ ಹಾಕಿ ಜಗ್ಗುತ್ತಾ ಹೇಳಿದಳು,

"ನನ್ನ ರಾಜ !....ನಿನಗೆಷ್ಟು ನನ್ನಿಂದ ತೊಂದರೆ !"

ಶೇಷಗಿರಿ ಅವಳನ್ನು ಹತ್ತಿರ ಸೆಳೆದು ಕೈ ಹಿಡಿದನು. ರಾಧ ದೂರ ಹೋಗಿ ತಪ್ಪಿಸಿಕೊಳ್ಳುತ್ತಾ,

"ನೋಡಿ ಅಲ್ಲಿ ಯಾರೋ ಕಿಟಕಿಯಿಂದ ನೋಡುತ್ತಾ ಇದ್ದಾರೆ."

ಕೂಡಲೆ ಶೇಷಗಿರಿ ಎದ್ದು ಕಿಟಕಿ ಎಡೆ ನೋಡಿದನು, ಅಲ್ಲಿ ಯಾರೂ ನೋಡುತ್ತಿರಲಿಲ್ಲ.

"ಎಲ್ಲಿ ರಾಧ ಕಾಣಿಸುವುದಿಲ್ಲವೇ ಅವರು ?"

"ಅಗೋ ನೋಡಿ", ಕೈ ನೀಡಿ ತೋರಿಸಿದಳು.

ಕಿಟಕಿಯಾಚೆ ಆಗಸದಲ್ಲಿ ಚಂದ್ರ ನಿಧಾನವಾಗಿ ಮೇಲೆ ಮೇಲೆ ಏರುತ್ತಿದ್ದ. ಬೆಳದಿಂಗಳು ಸುತ್ತಲೂ ಮೂಡಿತ್ತು. ಶೇಷಗಿರಿ ತಿಳಿಯದವನಾಗಿ ಕೇಳಿದ,

"ಯಾರು ರಾಧ ?"

"ಅದೇ ನೋಡಿ ಆಕಾಶದಲ್ಲಿ ಬೆಳಗುತ್ತಿಲ್ಲವೆ ? ಅವನು."

"ಅಷ್ಟೇನೇ ರಾಧ....ನಾನು ಯಾರೋಂತ ಹೆದರಿಕೊಂಡಿದ್ದೆ. ಹಾಗಾದರೆ ಕೆಳಗೆ ಹೋಗೋಣ ಬಾ. ಮೇಲಿದ್ದರೆ ಚಂದ್ರ ನೋಡುತ್ತಿರುತ್ತಾನೆ. ಅವನ ಕಣ್ಣು ತಪ್ಪಿಸಿ ಬೇರೆಯ ಕಡೆಗೆ ಹೋಗುವಾ" ಎಂದು ಕರೆದನು.

ರಾಧ ತನ್ನ ಕೊರಳಲ್ಲಿದ್ದ ಸರವನ್ನು ಅಡಿಗಡಿಗೆ ನೋಡಿ ಹಿಗ್ಗುತ್ತಾ ಶೇಷಗಿರಿಯ ಸಮೀಪಕ್ಕೆ ಬಂದಳು.

ಶೇಷಗಿರಿ–ರಾಧ ಚಂದ್ರನ ಬೆಳದಿಂಗಳ ಕಿರಣದೊಂದಿಗೆ ಕೂಡಿ ಈರ್ವರೂ ಚಂದ್ರಲೋಕದ ವೈಭವವನ್ನು ಕಾಣುತ್ತಾ ಮೈಮರೆತರು.

ರಾಧೆಗೆ, ಶ್ರೀನಿವಾಸಯ್ಯನ ಜೊತೆ ಬಾಳಿ ಬೇಸರ ಬಂದಿತ್ತು. 'ಆ ಶನಿ ಏಕಾದರೂ ಮನೆಗೆ ಬರುವುದೋ' ಎಂದುಕೊಳ್ಳುತ್ತಿದ್ದಳು. 'ಶೇಷಗಿರಿ ತನ್ನನ್ನು ಕರೆದೊಯ್ಯುವುದಾದರೆ' ಎಂದುಕೊಳ್ಳುವಳು ಅದರಂತೆ ಅವಳ ಉಪಾಯವೂ ಫಲಿಸುವ ದಿನಸ ಬಂತು. ಶೇಷಗಿರಿ ಒಂದು ದಿವಸ ನೆಟ್ಟಗೆ ಒಳಗೆ ಬಂದವನೇ ಮಾತು–ಕತೆ ನಡೆದ ಕೂಡಲೆ ಕಡೆಗೆ ಕೇಳಿದ –

"ರಾಧಾ, ನೀನೇಕೆ ನನ್ನ ಜೊತೆ ಬಂದುಬಿಡಬಾರದು ?"

ರಾಧ ಸುಮ್ಮನಿದ್ದಳು.

"ಹೇಳು ರಾಧ ನಾವಿಬ್ಬರೂ ಬೇರೆ ಊರಿಗೆ ಯಾಕೆ ಹೋಗಬಾರದು. ಚನ್ನಪಟ್ಟಣದಲ್ಲಿ ಕೆಲಸ ಖಾಲಿ ಇದೆಯಂತೆ. ನನಗೆ ಕೊಡುವುದಕ್ಕೆ ಒಪ್ಪಿದ್ದಾರೆ. ನಾನೊಬ್ಬನೇ ನಿನ್ನ ಬಿಟ್ಟು ಹೇಗೆ ಹೋಗಲಿ ? ನನ್ನ ಜೊತೆಗೆ ನೀನು ಬಂದುಬಿಡೋದಾದರೆ ಈಗಲೇ ಹೋಗಿಬಿಡೋಣ !"

ರಾಧ ಯೋಚಿಸಿದಳು. ಚನ್ನಪಟ್ಟಣ ದೂರವೇ ನಿಜ. ನಾನು ಹೋಗಿ ಬಿಟ್ಟರೆ ಏನಾಯಿತು ಈಗ ? ಹೇಳಿದಳು.

"ನಾನೇನು ಬಂದುಬಿಡಬಹುದು. ಆದರೆ ಸ್ವಲ್ಪ ದಿನ ಚೆನ್ನಾಗಿದ್ದು ಆಮೇಲೆ ನನ್ನನ್ನು ನೀವು ಬಿಟ್ಟುಬಿಟ್ಟರೆ ?"

"ಖಂಡಿತ ಇಲ್ಲ ರಾಧಾ ! ತಗೋ ನನ್ನಾಣೆ. ನಮ್ಮ ತಂದೆ–ತಾಯಿಗೆ ಹೇಳಿ ಮದುವೆ ಕೂಡ ಮಾಡಿಕೊಳ್ತೀನಿ."

ಅಂತೂ ರಾಧ ಪ್ರಯಾಣಕ್ಕೆ ಸಮ್ಮತಿ ಸೂಚಿಸಿದಳು.

ಶಶಿಧರನನ್ನು ಶ್ರೀನಿವಾಸಯ್ಯನ ಬಳಿ ಬಿಡುವುದೆಂದು ಶೇಷಗಿರಿ ಹೇಳಿದ. ಆದರೆ ರಾಧ ಒಪ್ಪಲಿಲ್ಲ. ತಮ್ಮನನ್ನು ಜೊತೆಗೇ ಕರೆದುಕೊಂಡು ಹೋಗ

ಬೇಕೆಂದು ಹೇಳಿದನು. ಕಡೆಗೆ ಶೇಷಗಿರಿ ಒಪ್ಪಿಗೆ ಇತ್ತನು. ಮಾರನೆಯ ದಿನವೇ ಮಧ್ಯಾಹ್ನದ ಬಸ್ಸಿಗೆ ಹೋಗುವುದೆಂದು ನಿಷ್ಕರ್ಷೆಯಾಯಿತು.

## ೨೦

ಶ್ರೀನಿವಾಸಯ್ಯನು ಅಂದು ಮನೆಗೆ ಬಂದಾಗ ರಾತ್ರಿ ಹತ್ತು ಘಂಟೆಯಾಗಿತ್ತು. ಹಗಲೆಲ್ಲಾ ಕೆಲಸಮಾಡಿ ದಣಿದು ಹೋಗಿದ್ದ. ಹೊಟ್ಟೆಯಲ್ಲಿ ಹಸಿವು, ಕಣ್ಣಿನಲ್ಲಿ ನಿದ್ರೆ, ಮೈಯಲ್ಲಿ ಆಯಾಸ ತುಂಬಿಹೋಗಿತ್ತು. ಮನೆಯಲ್ಲಿ ಸುಖವಾಗಿ ನಿದ್ರೆಯನ್ನಾದರೂ ಮಾಡಬೇಕೆಂದುಕೊಂಡು ಮನೆಗೆ ಬಂದನು. ಆದರೆ ಮನೆ ಬಾಗಿಲು ಹಾಕಿತ್ತು. ಕೈ ತಡವಿ ನೋಡಿದ. ಬೀಗ ಹಾಕಿತ್ತು. ಆಶ್ಚರ್ಯವಾಯಿತು, "ಎಲ್ಲಿ ಹೋಗಿರಬಹುದು ಇಷ್ಟು ಹೊತ್ತಿನಲ್ಲಿ ರಾಧ?" ಎಂದುಕೊಂಡ; "ಸಿನಿಮಾ-ಗಿನಿಮಾಕ್ಕೆ ಏನಾದರೂ ಹೋಗಿದ್ದಾಳೇನೂ. ಬರುತ್ತಾಳೆ" ಎಂದುಕೊಂಡು ಬೀಗ ತೆಗೆಯಲು ಸಾಹಸ ಮಾಡಿದ. ಯಾವುದೋ ಒಂದು ಮೊಳೆ ಹಾಕಿ ತಿರುಗಿಸಿದ. ಕಚ್ಚಿದ್ದ ಬೀಗ ತಾನಾಗಿಯೇ ತೆರೆಯಿತು. ಬಾಗಿಲು ತೆಗೆದು ದೀಪ ಹಚ್ಚಿ ನೋಡುತ್ತಾನೆ. ಸುತ್ತ ಒಂದು ಬಟೆಯೂ ಇಲ್ಲ. ಸಾಮಾನುಗಳೂ ಕೂಡ ಇಲ್ಲ. ಯಾರೋ ಸಂಸಾರಸ್ಥರು ಇದ್ದು ಬಿಟ್ಟು ಹೋದ ಮನೆಯಂತಿತ್ತು. ರಾಧ ಎಲ್ಲಾದರೂ ಹೊರಟುಹೋದಳೆ? ಮನೆ ಬಿಟ್ಟು ಹೋದಳೆ? ತಲೆಗೆ ಕೈ ಹಚ್ಚಿ ಕುಳಿತುಬಿಟ್ಟ ಶ್ರೀನಿವಾಸಯ್ಯ. ಹಾಗೆಯೇ ಅವನನ್ನು ನಿದ್ರಾದೇವಿ ತನ್ನ ಲೋಕಕ್ಕೆ ಎಳೆದುಕೊಂಡು ಹೋದಳು.

ಬೆಳಕು ಹರಿಯಿತು ರಾತ್ರಿಯ ಜ್ಞಾಪಕ ಬಂತು. ರಾಧ ಬರಲೇ ಇಲ್ಲ. ಕೆಲಸಕ್ಕೆ ಹೊತ್ತಾಗಿತ್ತು, ಹೊರಟುಬಿಟ್ಟ.

ಹೀಗೆಯೇ ಮೂರು-ನಾಲ್ಕು ದಿನಗಳು ಕಳೆದುಹೋದುವು. ರಾಧ-ಶಶಿಧರರವರ ಸುಳಿವೇ ಇಲ್ಲ. ತನ್ನನ್ನು ಬಿಟ್ಟು ಓಡಿಹೋದಳು ಎಂದು ಖಂಡಿತ ಮಾಡಿಕೊಂಡನು.

ದಿನ ಕಳೆದಂತೆ ಬೇಸರ ತಾನೇ ತಾನಾಯಿತು. ಕಷ್ಟಪಟ್ಟು ಕೆಲಸ ಮಾಡಿ ಮನೆಗೆ ಬಂದರೆ 'ನೀನೆ!' ಎನ್ನುವವರು ಯಾರೂ ಇಲ್ಲ. ಆದರಿಸುವವರು ಯಾರೂ ಇಲ್ಲ. ಈಗ ಜ್ಞಾಪಕ ಬಂತು. ರಾಧ ತಾನು ತಾಳಿ ಕಟ್ಟಿದ ಹೆಂಡತಿ ಅಲ್ಲ ಎಂಬುದು. ಹಿಂದಿನ ಸಾವಿತ್ರಿಯ ನೆನಪಾಯಿತು. ಪಾಪ ಎಷ್ಟು ಒಳ್ಳೆಯವಳು ಸಾವಿತ್ರಿ. ತನಗಾಗಿ ಹಗಲಿರುಳು ಹಾರೈಸುತ್ತಿದ್ದಳು. ಆದರಿಸುತ್ತಿದ್ದಳು. ಅಂತಹವಳಿಗೆ ನಂಬಿಕೆ-ದ್ರೋಹ ಮಾಡಿದ ಹಾಗಾಯಿತು. **ಮನೆಗೆ ಬಂದ ಮುತ್ತೈದೆ**ಯನ್ನು ಕಂಡು ಬಾಯಿಬಿಟ್ಟು ಹೆಂಡತಿಯನ್ನು ಕಳೆದುಕೊಳ್ಳಬೇಕಾಯಿತು. **"ಕಟ್ಟಿಕೊಂಡವಳು ಕಡೆಯತನಕ - ಇಟ್ಟುಕೊಂಡವಳು ಇರುವತನಕ"** ಎನ್ನುವ ಗಾದೆ ಜ್ಞಾಪಕಕ್ಕೆ ಬಂದು. ತನ್ನನ್ನು ನಂಬಿದವಳಿಗೆ ದ್ರೋಹ ಮಾಡಿದ್ದಾಯಿತು. ಈಗ ಅಂದೇನು ಪ್ರಯೋಜನ. ಸಾವಿತ್ರಿ ತೌರುಮನೆಗೆ ಹೋದ ಮೇಲೆ ಕಾಗದ ಕೂಡ ಬರೆದಿದ್ದಳು. ಎಷ್ಟು ಹೂವಿನಂತಹ ಮನಸ್ಸು ಅವಳದ್ದು. ಅವಳ ಪತ್ರಕ್ಕೆ ತಾನು ಕೊಟ್ಟ ಬೆಲೆಯಾದರೂ ಏನು ?

ಈಗ ಎಲ್ಲಿರುವಳೋ-ಏನಾಗಿರುವಳೋ ಸಾವಿತ್ರಿ. ಅವಳನ್ನೊಂದು ಬಾರಿ ನೋಡಬೇಕು. ಅವಳ ಕಾಲನ್ನು ಹಿಡಿದು ಕ್ಷಮೆ ಬೇಡಬೇಕು. ನನ್ನ ಕಂಡರೆ ಅವಳಿಗೆ ಕೋಪವಿರಬಹುದು. ಹೋಗಲಿ ಅವಳ ಕಾಲು ಹಿಡಿದು ಬೇಡಿಕೊಳ್ಳುವೆನು. ಅವಳ ಮನಸ್ಸು ಹೂವಿನಂತೆ ಹಗುರ. ಬೆಣ್ಣೆಯಂತೆ ಮೃದು. ಖಂಡಿತ ನನ್ನನ್ನು ಕ್ಷಮಿಸುತ್ತಾಳೆ. ನಾನು ಹೋಗುತ್ತೀನಿ. ಅವಳಿಲ್ಲದ ಬಾಳು ಏನು ಬಾಳು ? ಅವಳಿಲ್ಲದ ಮೇಲೆ ಇಲ್ಲಿ ಬಾಳುವುದಾದರೂ ಯಾತಕ್ಕೆ. ಅಂತೂ ಹೋಗಲೇಬೇಕು.

ಶ್ರೀನಿವಾಸಯ್ಯ ಹುಚ್ಚನಂತಾದ. ಹೆಂಡತಿಯನ್ನು ನೆನೆಸಿಕೊಂಡು ಅಳಲಾರಂಭಿಸಿದ. ಕೆಲಸಕ್ಕೆ ರಾಜೀನಾಮೆಕೊಟ್ಟ. ಮಾರನೆಯ ದಿನವೇ ಸಾವಿತ್ರಿಯೆಡೆ ಹೊರಟುಬಿಟ್ಟ.

## ೨೧

ಅದೇ ಮನೆ. ಹಿಂದೆ ಸಾವಿತ್ರಿಯೊಡನೆ ಅತ್ತೆಯ ಅಂತ್ಯ ಕಾಲದಲ್ಲಿ ಬಂದಾಗ ನೋಡಿದ ಮನೆ. ಆಗ ಸಾವಿತ್ರಿ ಪಕ್ಕದಲ್ಲಿ ಇದ್ದಳು. ಈಗ ಅವ ಳಿಲ್ಲ. ಅವನ ಮನಸ್ಸಿನಲ್ಲಿ ಮಾತ್ರ ಇದ್ದಾಳೆ. ಅದೇ ಮನೆಯಲ್ಲಿ ಅವಳಿ ರೋದು, ಖಂಡಿತ ನಿಜ. ಹೋಗಿ ಕಾಲಿಗೆ ಬಿದ್ದು ಕೇಳಿಕೊಳ್ಳೇನೆ. ಶ್ರೀನಿವಾಸಯ್ಯ ಯೋಚನಾತರಂಗದಲ್ಲಿ ಮುಳುಗಿಹೋಗಿದ್ದನು. ಮನೆಯ ಮುಂದೆ ಧಾವಿಸಿದ. ಬಾಗಿಲು ತೆರೆಯಲು ಕೈ ನೀಡಿದನು. ಕೈಗೆ ಸಿಕ್ಕಿದ್ದು ಬೀಗ. ಮನೆಗೆ ಬೀಗ ಹಾಕಿತ್ತು. ಸುತ್ತಮುತ್ತಲಿನ ಜನರನ್ನು ವಿಚಾ ರಿಸಿದ,

'ಅವರೆಲ್ಲಿ?' ಎಂದು.

ಯಾರೋ ಹೇಳಿದರು, "ರಾಮಸ್ವಾಮಿಗಳು ಆ ಮನೆ ಬಿಟ್ಟು ಆಗಲೇ ಆರು ತಿಂಗಳಾಯತು. ಎಲ್ಲಿಗೆ ಹೋದರೋ ಎಂಬುದು ಗೊತ್ತಿಲ್ಲ" ಎಂದರು.

ಶ್ರೀನಿವಾಸಯ್ಯನಿಗೆ ಸಿಡಿಲುಬಡಿದಂತಾಯ್ತು. ಈಗ ಮಾಡುವುದಾ ದರೂ ಏನು? ಈ ವಿಶಾಲ ಪ್ರಪಂಚದಲ್ಲಿ ಸಾವಿತ್ರಿಯನ್ನು ಹುಡುಕುವು ದಾದರೂ ಹೇಗೆ?

ಶ್ರೀನಿವಾಸಯ್ಯನಿಗೆ ಬವಣೆ ಬಂದಹಾಗಾಯಿತು. ಮೆಲ್ಲಗೆ ಅಲ್ಲಿಂದೆದ್ದು ನಡೆದ.

ಎಲ್ಲಿಗೆ?

ಶ್ರೀನಿವಾಸಯ್ಯ ಮುಂದೆ ಮುಂದೆ ನಡೆದನು ಎಲ್ಲಿಗೆ? ಅಂತೂ ನಡೆದ. ದಾರಿಯಲ್ಲಿ ನಡೆದು ದಡೆದು ಬೇಸತ್ತ. ಸ್ಟೇಷನ್‌ಗೆ ಬಂದ. ಯಾವುದೋ ಊರಿನ ಗಾಡಿ ಹೊರಡಲು ಸಿದ್ಧವಾಗಿತ್ತು. ಯಾವ ಊರಿಗೆ ಆದರೇನು?

ಎಲ್ಲಿಗೆ ಹೋದರೇನು? ದಾರಿಯಲ್ಲಿ ಟಿಕೆಟ್ ಕಲೆಕ್ಟರ್ ಚೆಕ್ ಮಾಡಲು ಬಂದ. ಪ್ರಯಾಣಿಕರ ಕಾಲು ಹಿಡಿದು ಬೇಡಿಕೊಂಡನು. ಅಂತೂ ಅವನ ಕಣ್ಣಿನಿಂದ ಪಾರಾದನು. ರೈಲು ಸ್ಟೇಷನ್ ಮುಟ್ಟಿತು. ಜನಜಂಗುಳಿ ಜಾಸ್ತಿಯಾಗಿತ್ತು. ಊರಿನ ಹೆಸರು ನೋಡಿದ. ತಾನು ವಾಸವಾಗಿದ್ದ ಊರೇ! ಮತ್ತೆ ಬೇರೆ ರೈಲು ಹತ್ತಿದ. ಅಲ್ಲಿಂದ ನೆಟ್ಟಗೆ 'ಕಾಟ್ಪಾಡಿ'ಗೆ ಬಂದ. ಅಲ್ಲಿ ಇಳಿದ. ಬಹಳ ಹಸಿವಾಗಿತ್ತು. ಜೋಬು ತಡಕಾಡಿದ. ಕೈಗೆ ಒಂದಾಣೆ ಸಿಕ್ಕಿತು. ಕಡೆಗೆ ಕಡಲೆಪುರಿ ಕೊಂಡುತಿಂದು ನೀರು ಕುಡಿದನು. ಮತ್ತೆ ಬಂದು ರೈಲು ಹಿಡಿದನು. ನೇರ ಮದ್ರಾಸ್‌ಗೆ ಬಂತು. ದಾರಿಯಲ್ಲಿ ಪಡಬಾರದ ಅಸ್ತವ್ಯಸ್ಥೆಗಳನ್ನು ಪಟ್ಟನು. ಸ್ಟೇಷನ್ ದಾಟಿದ ಕೂಡಲೆ ಊರು ಅವನನ್ನು ಸ್ವಾಗತಿಸಿತು. ದೊಡ್ಡ ಊರು. ಬಸ್, ಟ್ರಾಮ್‌ಗಳು ಓಡಾಡುವ ದೊಡ್ಡ ಪಟ್ಟಣ. ಅಲ್ಲಿಂದ ಇಲ್ಲಿಗೆ ತಿರುಗಾಡಿದ. ಅಲ್ಲಿ ಇಲ್ಲಿ ಕುಳಿತು ಸುಸ್ತಾಗಿ ಒಂದೆಡೆ ಮಲಗಿದನು.

ಸ್ವಲ್ಪ ಹೊತ್ತಿನೊಳಗೆ ಯಾರೋ ಒಬ್ಬ ಬಂದು ಎಬ್ಬಿಸಿದ. ನೋಡಿದರೆ ಸಾ ಹು ಕಾ ರ ನಾ ಗೆ ಇದ್ದ. ಕೈಯಲ್ಲಿ ಗಂಟು-ಮೂಟೆಗಳು. ತೊಗೊ, ಎತ್ತುಕೋ ಎಂದು ತಮಿಳಿನಲ್ಲಿ ಕಿರುಚಿದ. ಹೆದರಿ ಕಂಗಾಲಾಗಿ ಶ್ರೀನಿವಾಸಯ್ಯ ತಲೆಯ ಮೇಲೆ ಹೊತ್ತು ನಡೆದನು. ಯಾವುದೋ ದೊಡ್ಡ ಬಂಗಲೆಯ ಬಳಿ ಕರೆತಂದ. ಗಂಟು-ಮೂಟೆ ಇಳಿಸಿಕೊಂಡು ಎರಡಾಣೆ ಕೈಯಲಿಟ್ಟ. ಈ ಜನ್ಮದಲ್ಲಿ ಮೊದಲಬಾರಿ ಕೂಲಿಮಾಡಿ ಸಂಪಾದಿಸುತ್ತಿರುವುದು. ಹೇಗೋ ಅಂತೂ ಎರಡಾಣೆ ಜೋಬಿನಲ್ಲಿ ಹಾಕಿಕೊಂಡು ತನ್ನ ಬಾಳಿಗೆ ತಾನೇ ನಕ್ಕ.

ಅದೇ ಸಮಯಕ್ಕೆ ಅವನ ಭಾಗದಲ್ಲಿ ಅದೃಷ್ಟದ ಛಾಯೆಯು ಸುಳಿಯುತ್ತಿತ್ತು.

ಒಂದು ದಿನ ಮರದ ನೆರಳಿನಲ್ಲಿ ಕುಳಿತು ತನ್ನ ಹಿಂದಿನ ಸುಖದ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಿರುವಲ್ಲಿ, ದೂರದಿಂದ ಅವನನ್ನು ಯಾರೋ ಕರೆದಂತಾಯಿತು. ಹಿಂತುರಿಗಿ ನೋಡಿದನು. ಯಾವನೋ ಒಬ್ಬನು ಕುಡಿದ ಅಮಲಿನಿಂದ ದಾರಿಯಲ್ಲಿ ಓಲಾಡುತ್ತಾ ಬರುತ್ತಿದ್ದನು. ಅವನ ಬಟ್ಟೆಗಳು ಧೂಳೀಮಯವಾಗಿತ್ತು. ಶ್ರೀನಿವಾಸಯ್ಯ ಅವನನ್ನು ನೋಡಿದ ತಕ್ಷಣ ಅವನು ಹತ್ತಿರ ಬರಲು ಕೈಸನ್ನೆ ಮಾಡಿದ. ವಿಷಯವೇನೆಂದು ತಿಳಿಯಲು ಅವನ ಬಳಿಗೆ ಬಂದ. ಬಂದವನು ತೂಗಾಡುತ್ತಾ ಕೇಳಿದ,

"ಏನ್ಲಾ ಸುಖ ಅನ್ನುವುದು ಎಲ್ಲಿ ಇದೆ ಗೊತ್ತಾ. ನಾನು ತೋರಿಸುತ್ತೀನಿ ಬಾರಯ್ಯಾ" ಎಂದು ಕೇಳಿದ ತೆಲುಗಿನಲ್ಲಿ.

ಶ್ರೀನಿವಾಸಯ್ಯ ದಿಗ್ಭ್ರಮೆಗೊಂಡ. ಎಲ್ಲೋ ಕುಡಿದಿದ್ದರಿಂದ ಆ ರೀತಿ ಮಾತನಾಡಿದ ಎಂದುಕೊಂಡು ಅಲ್ಲಿಂದ ಓಡಿ ತಪ್ಪಿಸಿಕೊಂಡ.

ಇವನನ್ನು ಮೊದಲಿನಿಂದಲೂ ಅನುಮಾನದಿಂದ ನೋಡುತ್ತಿದ್ದ ನೋಡುತ್ತಿದ್ದ ಯಾವನೋ ಅಪರಿಚಿತ ಒಂದು ದಿನ ಅವನನ್ನು ಕೇಳಿದ.

"ನೀವು ಯಾವ ಊರಿನವರು. ಇಲ್ಲಿಗೇಕೆ ಬಂದಿರಿ" ಎಂದು.

ಶ್ರೀನಿವಾಸಯ್ಯ ಉತ್ತರ ಕೊಟ್ಟ.

"ಇದೇ ಊರಿನವನೇ" ಎಂದು.

"ಹಾಗಾದರೆ ಇರುವುದೆಲ್ಲಿ?"

"ನೆರಳು ಸಿಕ್ಕಿದಕಡೆ" ಎಂದುತ್ತರ ಹೇಳಿದ.

"ಹಾಗಲ್ಲ ಬಾಬು. ನಾನೂ ವಿಜಯಪುರದ ಊರಿನವನು. ನನ್ನ ಹೆಸರು ಜನಾರ್ಧನ ನಾಯ್ಡು. ನಾನು ಮದ್ರಾಸಿಗೆ ಸುಮ್ಮನೆ ಬಂದಿದ್ದೀನಿ. ಇಲ್ಲೇ ಹೋಟೇಲಿನಲ್ಲಿದ್ದೀನಿ. ನೀನು ಸಮ್ಮನೆ ಇಲ್ಲೆಲ್ಲಾ ಏಕೆ ಅಲಿಯುತ್ತೀ. ನನ್ನ ಬಳಿಗೆ ಬಾ. ನನ್ನ ರೂಮಿನಲ್ಲಿ ಇರುವಿ" ಎಂದು ತೆಲುಗಿನಲ್ಲಿ ಹೇಳಿದ.

ಅವನ ಮಾತುಗಳಿಗೆ ಶ್ರೀನಿವಾಸಯ್ಯ ಒಪ್ಪಿದನು. ಅದರಂತೆ ಅವ ನೊಡನೆ ನಡೆದ.

ರೂಮಿನೊಳಗಿನಿಂದ ಯಾವುದೋ ದುರ್ವಾಸನೆ ಅವನನ್ನು ಸ್ವಾಗತಿ ಸಿತ್ತು. ಬಂದವನೇ ಸುತ್ತಲೂ ನೋಡಿದನು. ಕುಡಿದು ಖಾಲಿ ಮಾಡಿದ ಬಾಟಲ್‌ಗಳನ್ನು ಅಲ್ಲಲ್ಲಿ ಹರಡಿದ್ದರು. ಕುಡಿದು ಮತ್ತರಾಗಿ ಬಿದ್ದಿದ್ದ ಯಾರೋ ಇಬ್ಬರು ವ್ಯಕ್ತಿಗಳು ಅವನಿಗೆ ಕಾಣಿಸಿದರು. ಅವರಲ್ಲಿ ಒಬ್ಬರು ಹೆಂಗಸು. ಅದೊಂದು ವಿಲಾಸ ಗೃಹವೆಂದೇ ತಿಳಿದುಕೊಂಡ. "ಯಾರವರು?" ಎಂದು ನಾಯ್ಡುವನ್ನು ಕೇಳಿದ.

"ಅವರೂ ನಮ್ಮವರೆ!" ಎಂದುತ್ತರ ಹೇಳಿ ಒಳಗೆ ನಡೆದ.

ಶ್ರೀನಿವಾಸಯ್ಯನಿಗೆ ಜಿಗುಪ್ಸೆ-ಅಸಹ್ಯ ಏಕಕಾಲದಲ್ಲಿ ಉಂಟಾಯಿತು. ಅಂತಹ ಪಾಳು ಬಾಳು ತಾನು ತುಳಿಯಲೇಬಾರದೆಂದು ಹಿಮ್ಮೆಟ್ಟಬೇಕೆಂದು ಕೊಂಡು, ತಿರುಗಿದ. ಅದನ್ನು ಗಮನಿಸಿದವನೇ ನಾಯ್ಡು ಅವನನ್ನು ಹಿಡಿದು ಒಳಗೆ ಎಳೆದ. ತಪ್ಪಿದರೆ ಸಾಕೆಂದುಕೊಂಡು ದಡದಡನೆ ಅಲ್ಲಿಂದ ಓಡಿದನು ಶ್ರೀನಿವಾಸಯ್ಯ.

ಜೀವನದ ನಾನಾ ರೀತಿಯ ಬಣ್ಣವು ಅವನನ್ನು ಜಿಗುಪ್ಸೆ ಪಡುವಂತೆ ಮಾಡಿತು.

೨೨

ಶಂಕರ ಎಸ್. ಎಸ್. ಎಲ್. ಸಿ. ಪರೀಕ್ಷೆಯ ಫಲಿತಾಂಶ ಬರುವುದರಲ್ಲಿತ್ತು. ಶಾರದೆ ಮುಂದಿನ ವರ್ಷ ಕಟ್ಟುವವಳಿದ್ದಳು. ಕಾಯುತ್ತಿದ್ದ ಹಾಗೆ ಆ ದಿನವೂ ಬಂತು. ಸಾವಿತ್ರಿ ಮಗನಿಗೆ ಶುಭವಾಗಲಿ ಎಂದು ದೇವರ ಮುಂದೆ ದೀಪ ಇಟ್ಟಳು. ರಾಮಸ್ವಾಮಿಗಳು ಮೊಮ್ಮಗನಿಗೆ ಆಶೀರ್ವದಿಸಿದರು.

ಆ ದಿನ ಸಂಭ್ರಮದಿಂದ ಶಂಕರ ತನ್ನ ಫಲಿತಾಂಶ ತಿಳಿಯಲು ಹೊರಟನು. ನೋಡಿದ. ಮಾತೇ ಹೊರಡಲಿಲ್ಲೊದು. ಫಸ್ಟ್ ಕ್ಲಾಸ್ ಆಗಿದ್ದ. ಒಂದೇ ಉಸಿರಿನಲ್ಲಿ ಮನೆಗೆ ಓಡಿಬಂದು ಸುದ್ದಿ ಹೇಳಿದನು. ಸಾವಿತ್ರಿ ಸಂತೋಷಪಟ್ಟಳು. ಅಂದು ಬಗೆ ಬಗೆಯ ತಿಂಡಿಗಳನ್ನು ಮಾಡಿಟ್ಟು ದೇವರಿಗೆ ಭಕ್ತಿಯಿಂದ ಕೈ ಮುಗಿದಳು.

ಮುಂದೆ ಶಂಕರ ಒಬ್ಬ ಡಾಕ್ಟರ್ ಆಗಲಿ ಎಂಬ ಆಶೆ ಸಾವಿತ್ರಿಗಿತ್ತು. ಅದನ್ನು ಕಲಿತರೆ ಎಷ್ಟು ಜನರಿಗೆ ಸೇವೆ ಮಾಡಿದಂತೆ ಆಗುತ್ತೆ ಎಂಬುದು ಅವಳ ಆಶಯವಾಗಿತ್ತು.

ಅದರಂತೆ ಶಂಕರ ಬೆಂಗಳೂರಿನಲ್ಲಿ ಎಲ್. ಎಂ. ಪಿ. ಪರೀಕ್ಷೆಗೆ ಓದಲು ಸೇರಿದನು. ನಾಲ್ಕು ವರ್ಷ ಕಷ್ಟಪಟ್ಟಲ್ಲಿ ತಾನೊಬ್ಬ ಡಾಕ್ಟರ್ ಆಗಬಹುದು ಎಂಬ ಉತ್ಸಾಹ ಶಂಕರನಿಗೆ.

ಅದರಂತೆ ಶಂಕರ ಮೆಡಿಕಲ್ ಸ್ಕೂಲಿಗೆ ಸೇರಿದನು. ಕಷ್ಟಪಟ್ಟು ಓದಲಾರಂಬಿಸಿದನು.

ಶಾರದೆ ಈ ವರ್ಷ ಪರೀಕ್ಷೆಗೆ ಕೂಡುವಳಿದ್ದಳು. ಮಕ್ಕಳನ್ನು ನೋಡಿ ಹರ್ಷಪಡುವ ಪುಣ್ಯ ಅವರಿಗೆ ಇಲ್ಲದಂತಾಯಿತಲ್ಲಾ ಎಂಬುದೇ ಸಾವಿತ್ರಿಯ ಕೊರಗು. ಆದರ ಜೊತೆಯಲ್ಲಿ ಇನ್ನೊಂದು ಶಂಕೆಗೆ ಜಾಗ. "ಈಗ ರಾಧೆಗೆ ಮಕ್ಕಳಾಗಿವೆಯೋ ಏನೋ ಆದಕ್ಕೆ ನನ್ನ ಜ್ಞಾಪಕವೂ ಇಲ್ಲ ಅವಳಿಗೆ" ಎಂದು ನೊಂದುಕೊಳ್ಳುವಳು. ಮಗಳ ಇಂಗಿತವನ್ನರಿತ ರಾಮಸ್ವಾಮಿಗಳು ಸಮಾಧಾನಪಡಿಸುತ್ತಿದ್ದರು.

ಆಡುತ್ತಾ ಹೋಗುತ್ತಾ ಆಗಲೇ ಎರಡು ವರ್ಷ ಕಳೆದುಹೋಯಿತು.

ಸಾವಿತ್ರಿಯ ತಲೆಯಲ್ಲಿ ಕೆಂಗೂದಲು ಕಾಲಿಕ್ಕತೊಡಗಿತು. ಇನ್ನು ಮುಪ್ಪು ಪ್ರಾಪ್ತವಾಗುವ ಕಾಲ ಎಂದುಕೊಂಡಳು ಸಾವಿತ್ರಿ.

* * * *

ಚನ್ನಪಟ್ಟಣ ಬಸ್ ಸ್ಟ್ಯಾಂಡ್‌ನಲ್ಲಿ ಶೇಷಗಿರಿ ರಾಧಳೊಂದಿಗೆ ಬಸ್ ನಿಂದ ಇಳಿದ. ಸ್ಕೂಲಿನ ಮುಖ್ಯೋಪಾಧ್ಯಾಯರು ಅಲ್ಲಿಗೆ ಬರುವರೆಂದು ಹೇಳಿ ಕಾಗದ ಬರೆದಿದ್ದರು. ಅದಕ್ಕಾಗಿ ಶೇಷಗಿರಿ ಸುತ್ತಲೂ ತಿರುಗಿ ನೋಡಿದನು, ದೂರದಲ್ಲಿ ಸ್ಕೂಲಿನ ಮುಖ್ಯೋಪಾಧ್ಯಾಯರಾದ ಗೋಪಾಲನ್‌ರವರು ಕಾರಿನಲ್ಲಿ ಕುಳಿತುಕೊಂಡು ಬಂದು ಅಲ್ಲಿ ಇಳಿದುದು ಕಾಣ ಬಂತು. ಶೇಷಗಿರಿಯನ್ನು ಕಂಡವರೇ ಬೇಗ ಬಂದು ಅವನ ಕೈ ಕುಲುಕಿದರು.

"ಈಗ ಬಂದಿರೇನು?"

"ಇದೇತಾನೇ ಬಂದಿವಿ. ನೀವು ಇನ್ನೂ ಬಂದಿರಲಿಲ್ಲವಾದ್ದರಿಂದ ಹಾಗೇ ನೋಡುತ್ತಲಿದೆ."

"ನಾನು ಬೇಗ ಬರಬೇಕೂಂತಲೇ ಹೊರ ಬಂದೆ. ಆದರೆ ದಾರಿಯಲ್ಲಿ ಕಾರಿಗೆ ಪೆಟ್ರೋಲ್ ತುಂಬಿಕೊಂಡು ಬರುವ ವೇಳೆಗೆ ಹೊತ್ತಾಗಿ ಹೋಯ್ತು ........ನೀವೊಬ್ಬರೇ ಬಂದಿರುವಿರೋ ಅಥವಾ........"

"ಇಲ್ಲ. ನಮ್ಮ ಮನೆಯವರೊಂದಿಗೇನೇ ಬಂದಿರುವೆನು."

ಕಾರಿನ ಡ್ರೈವರ್ ಸಾಮಾನುಗಳನ್ನು ಕಾರಿಗೆ ತುಂಬಿ ಬಂದನು.

ರಾಧಳನ್ನು ತೋರಿಸಿ,

"ಇವರೇ ಗೋಪಾಲಂ, ನಮ್ಮಾಕೆ"

"ಓ....ನಮಸ್ಕಾರ!" ಗೋಪಾಲಂ ರಾಧಳನ್ನು ಅಪಾದ ಮಸ್ತಕನೋಡಿ ಮುಗುಳ್ನಗುತ್ತಾ ಹೇಳಿದನು.

"ನಮಸ್ಕಾರ" ಎಂದು ಉತ್ತರಿಸಿ ರಾಧ ಸುಮ್ಮನಾದಳು.

"ಬನ್ನಿ. ಕಾರಿನಲ್ಲಿ ಮನೆಗೆ ಹೋಗೋಣ."

ರಾಧ, ಶೇಷಗಿರಿಯನ್ನು ಹಿಂದಿನ ಸೀಟಿನಲ್ಲಿ ಕೂಡಿಸಿ, ಗೋಪಾಲಂ ತಾನು ಡ್ರೈವರ್ ಪಕ್ಕದ ಸೀಟಿನಲ್ಲಿ ಕುಳಿತುಕೊಂಡನು.

ಕಾಲು ಘಂಟೆಯ ವೇಳೆಗೆ ಕಾರು ಗೋಪಾಲಂ ಮನೆಯ ಮುಂದೆ ನಿಂತಿತು. ಗೋಪಾಲಂ ಹೆಂಡತಿ ಹೊರಬಂದು ಅತಿಥಿಗಳಿಗೆ ಸ್ವಾಗತ ಬಯಸಿದರು. ವಿಶಾಲವಾದ ಭವ್ಯ ಕಟ್ಟಡ. ದೊಡ್ಡದಾದ ಆ ಮನೆಯಲ್ಲಿ ವಾಸಿಸುವವರು ಕೆಲವೆ ಮಂದಿ ಎಂದು ಕೂಡಲೇ ಗೋಚರಿಸಿತು.

"ನೀವು ಊರಿಗೆ ಹೊಸಬರಾದ್ದರಿಂದ, ಎಲ್ಲವನ್ನೂ ಇಲ್ಲಿಯೇ ಮಾಡಿರುವೆನು. ಈ ಮನೆಯ ಹಿಂದೆ ಇರುವ ಮನೆಯೇ ನಿಮಗೆಂದು ಸಿದ್ಧ ಮಾಡಿರುವೆನು. ಬನ್ನಿ ಹೋಗಿ ನೋಡಿ ಬರುವ" ಎಂದು ಗೋಪಾಲಂ ಔಟ್ ಹೌಸಿನೊಳಗೆ ಕರೆದುಕೊಂಡು ಹೋದರು.

ಮನೆಯೇನೋ ದೊಡ್ಡದಾಗಿಯೇ ಇತ್ತು. ಇಬ್ಬರಿಗೆ ಅದು ದೊಡ್ಡದಾಗಿತ್ತು. ಶೇಷಗಿರಿ, ತಂದ ಸಾಮಾನುಗಳನ್ನು ಅಲ್ಲಿ ಇರಿಸಿ ಹೇಳಿದನು.

"ನೀವು ಮಾಡಿರುವ ಉಪಕಾರವನ್ನು ಮರೆಯಲಾರೆ."

"ಅಯ್ಯೋ ಬಿಡಿ. ಇದೇನು ಮಹಾ!....ನೋಡಿ, ನಮ್ಮ ಸ್ಕೂಲು ಕೂಡ ಇಲ್ಲಿಗೆ ನಾಲ್ಕು ಫರ್ಲಾಂಗು ದೂರ ಇದೆ ಅಷ್ಟೆ. ಸಾಯಂಕಾಲ ಆ ಕಡೆಗೆ ಹೋಗೋಣ. ಈಗತಾನೆ ಪ್ರಯಾಣದಿಂದ ಬಳಲಿರುವಿರಿ. ವಿಶ್ರಾಂತಿ ತೆಗೆದುಕೊಳ್ಳಿ." ಎಂದು ಹೇಳಿ ಗೋಪಾಲಂ ಮನೆಗೆ ಹೊರಟರು.

ರಾಧ ಶೇಷಗಿರಿಯೊಡನೆ ಹೊಸ ಸಂಸಾರವನ್ನು ಆರಂಭಿಸಿದಳು.

ಎರಡು ದಿವಸಗಳಲ್ಲಿ ಊರನ್ನೆಲ್ಲಾ ಸುತ್ತಿ ಪ್ರತಿಯೊಂದು ಜಾಗವನ್ನೂ ನೋಡಿ ಬಂದರು.

ಶೇಷಗಿರಿ ಹೈಸ್ಕೂಲಿನ ಉಪಾಧ್ಯಾಯನಾಗಿ, ರಾಧಳೊಡನೆ ಆನಂದ ವನ್ನು ಸವಿಯುತ್ತಲಿದ್ದನು.

ಒಂದು ವಾರ ಕಳೆಯಿತು. ಮಧ್ಯಾಹ್ನವಾಗಿತ್ತು. ಯಾರೋ ಮನೆಯ ಮುಂದೆ ಶೇಷಗಿರಿಯನ್ನು ಕೂಗುತ್ತಿದ್ದರು. ರಾಧ ಎದ್ದು ಹೋಗಿ ಬಾಗಿಲು ತೆಗೆದು ನೋಡಿದಳು. ಯಾರೋ ಅಪರಿಚಿತರು, ಇಬ್ಬರು ಬಂದಿದ್ದರು. ಒಬ್ಬರಿಗೆ ವಯಸ್ಸಾಗಿತ್ತು. ರಾಧಳನ್ನು ಕಂಡೊಡನೆ ಕೇಳಿದರು.

"ಶೇಷಗಿರಿರಾಯರ ಮನೆ ನಿಮಗೆ ತಿಳಿದಿದೆಯೆ?"

"ಇದೇ ಮನೆ."

"ಅವರಿದ್ದಾರೆಯೆ?"

"ಇಲ್ಲ. ಹನ್ನೊಂದು ಘಂಟೆಗೆ ಸ್ಕೂಲಿಗೆ ಹೋದರು."

ಬಂದವರಿಗೆ ರಾಧಳ ಗುರುತು ಪರಿಚಯವಾಗದೆ ಸಂದೇಹದೊಂದಿಗೆ ಕೇಳಿದರು.

"ನಿಮಗೆ ಶೇಷಗಿರಿರಾಯರೇನಾಗಬೇಕು."

ಅದಕ್ಕೆ ಉತ್ತರವಾಗಿ ರಾಧ ಮುಗುಳ್ನಗೆ ನಕ್ಕು ತಲೆ ತಗ್ಗಿಸಿದಳು.

ಬಂದವರಿಗೆ ದಿಗ್ಭ್ರಮೆಯಾಯಿತು. ಆತುರದಿಂದ ಕೇಳಿದರು.

"ಏನು ನೀವು ಅವರ......"

"ಪತ್ನಿ"

"ಶೇಷಗಿರಿಗೆ ಮದುವೆಯಾಗಿದೆಯೇನು?"

"ಹೂ" ಎನ್ನುವಂತೆ ರಾಧ ತಲೆಯಲ್ಲಾಡಿಸಿದಳು.

ಬಂದವರಿಗೆ ಕೋಪದಿಂದ ಕೆಂಡದಂತಾಯಿತು ದೇಹ.

"ಯಾವಳೇ ನೀನು ಅವನ ಹೆಂಡತಿಯಂತೆ ನಾಲಿಗೆ ಸಿಗಿದುಹಾಕಿ ಬಿಟ್ಟೇನು. ನಾನು ಯಾರೂ ಅಂತ ಇದ್ದಿ. ಶೇಷಗಿರಿ ತಂದೆ. ಅವನನ್ನು ಹೆತ್ತ ಅಪ್ಪ!" ಕಿರುಚಿದರು.

ರಾಧ ನಡುಗಿದಳು. ಬಂದವರು ಶೇಷಗಿರಿಯ ತಂದೆ ಎಂದು ತಿಳಿಯುತ್ತಲೇ ಏನೂ ತಿಳಿಯದವಳಾದಳು.

"ನನಗೆ ಅವೆಲ್ಲ ಗೊತ್ತಿಲ್ಲ. ನಿಮ್ಮ ಮಗನನ್ನೇ ಹೋಗಿ ಕೇಳಿಕೊಳ್ಳಿ!"

ಉತ್ತರವನ್ನು ನಿರೀಕ್ಷಿಸದೆಯೇ ಬಂದವರು ಹೊರಟುಹೋದರು.

ತರಗತಿಯಲ್ಲಿ ಪಾಠ ಮಾಡುತ್ತಿದ್ದ ಶೇಷಗಿರಿಗೆ ಸ್ಕೂಲಿನ ಜವಾನನು ಯಾರೋ ಶೆಷಗಿರಿಯ ತಂದೆ ಬಂದಿರುವರೆಂದು ತಿಳಿಸಿದ. ಕುತೂಹಲದಿಂದ ಶೇಷಗಿರಿ ಕ್ಲಾಸಿಗೆ ರಜ ಕೊಟ್ಟು ಹೊರಗೆ ಬಂದನು. ಹೌದು ನಿಜ. ತನ್ನ ತಂದೆಯನ್ನು ಕಂಡವನೇ ಶೇಷಗಿರಿ ಹೌಹಾರಿದ. ಅವರ ಕೆಂಡದಂತಿದ್ದ ಮುಖವನ್ನು ನೋಡಿದ ಕೂಡಲೇ, ಏನೋ ಅನಾಹುತ ನಡೆದಿರಬೇಕೆಂದು ಕೊಂಡ. ಕಡೆಗೂ ಕೇಳಿದನು.

"ಯಾವಾಗ ಬಂದಿರಿ ಅಪ್ಪಾ!"

"ಆಗ್ಲೆ ಬಂದೆ" ಕೋಪದಿಂದ ನುಡಿದರು.

"ಏನು ಸಮಾಚಾರ ಅಪ್ಪಾ ಹೇಗೆ ಬಂದಿರಿ ಇಲ್ಲಿಗೆ. ನಾನು ನಿಮಗೆ ಅಡ್ರೆಸ್ ಕೊಟ್ಟೇ ಇರಲಿಲ್ಲ."

"ನಿಜ ನನಗೆ ಯಾಕೆ ಕೊಡ್ತಿ ಹೇಳು. ಯಾವಳೋ ಬೀದಿಯಲ್ಲಿ ಬಿದ್ದವಳ ಜೊತೆಗೆ ಸಂಸಾರ ಮಾಡ್ತಾ ಇದ್ದೀಯಲ್ಲಾ, ನಾಚಿಕೆಯಿಲ್ಲ. ವಯಸ್ಸಿಗೆ ಬಂದ ಮಗ ನೀನು. ಬುದ್ಧಿಯೇ ಇಲ್ಲವೇನು? ಅವತ್ತಿನಿಂದಲೂ ಹೇಳ್ತಿದ್ದೆ ನಿನಗೆ ಬೇಗನೇ ಮದುವೆ ಮಾಡಿಕೋ ಅಂತ. ಹೆಣ್ಣುಗಳನ್ನೂ ಕೂಡ ನೋಡಿದ್ದೆ. ನಿಮ್ಮಮ್ಮ ಎಷ್ಟು ಆಸೆಯಿಂದ ಇದ್ದಳು. ಇದೇನಾ, ನೀನು ಮಾಡಿದ ಪ್ರತಿಫಲ. ನಿಮ್ಮಮ್ಮ ಈ ಸುದ್ದಿ ಕೇಳಿದರೆ ಎಷ್ಟು ನೊಂದುಕೊಳ್ತಾಳೆ ಯೋಚನೆ ಮಾಡಿದ್ಯೇನು. ಏನೋ ಹುಡುಗ ಓದಿಕೊಳ್ಳಲಿ ಎಂದು ಊರಿನಲ್ಲಿ ಬಿಟ್ಟದ್ದಕ್ಕೆ ನೀನು ಇದೇನಾ ಮಾಡಿದುದು?"

"ನಿಮಗೆ ಇವನ್ನೆಲ್ಲಾ ಯಾರಪ್ಪಾ ಹೇಳಿದ್ದು?" ಶೇಷಗಿರಿ ತಪ್ಪಿಸಿಕೊಳ್ಳಲು ಕೇಳಿದ.

"ನಾನೇ ಹೋಗಿದ್ದೆ. ಕಣ್ಣಾರೆ ನೋಡಿದೆ. ಕಿವಿಯಾರ ಕೇಳಿದೆ, ಇದು ಒಳ್ಳೆಯದಲ್ಲಾ ಶೇಷೂ, ನಾನು ಹೇಳುತ್ತೀನಿ ಕೇಳು. ಇದು ಬಿಟ್ಟುಬಿಡು."

"ಇಲ್ಲಪ್ಪ ನಾನು ಅವಳನ್ನು ಮದುವೆ ಮಾಡ್ಕೊಂಡೆ."

"ಮದುವೆ....ಮದುವೆಯಂತೆ. ಅಪ್ಪನಿಗೆ ಕಾಣದೆಯೇ ಮದುವೆ!"

ಶೇಷಗಿರಿಯ ತಂದೆ, ಮಗನ ಮನೆಗೆ ಹೋಗಲಿಲ್ಲ. ಕಡೆಗೆ ಕೇಳಿದರು.

"ನೋಡು ಶೇಷೂ, ನಾನಿಲ್ಲಿಗೇತಕ್ಕೆ ಬಂದೆ ಗೊತ್ತೇ? ನಿನಗೆ ಈಗ ಹೆಣ್ಣು ನೋಡಿದ್ದೇವೆ. ಅದನ್ನು ಮದುವೆಯಾಗಲು ನಿನ್ನ ಒಪ್ಪಿಗೆಯನ್ನು

ತೆಗೆದುಕೊಂಡು ಹೋಗುವುದೆಂದು. ಅಲ್ಲಿ ನಿನಗೆ ಚನ್ನಪಟ್ಟಣಕ್ಕೆ ವರ್ಗಾಯಿಸಿರುವುದು ತಿಳಿಯಿತು. ನಂತರ ನಾನು ಇಲ್ಲಿಗೆ ಬಂದೆ. ಈಗಲೂ ಹೇಳ್ತೀನಿ ಶೇಷೂ........ನಿನ್ನ ಬುದ್ಧಿ ಉಪಯೋಗಿಸಿ ಯೋಚನೆ ಮಾಡು. ಅವಳ್ಯಾರು........? ಎಲ್ಲವನ್ನೂ ಹೇಳಿಬಿಡು ಶೇಷೂ! ನನ್ನನ್ನು ಸ್ನೇಹಿತ ಎಂದು ತಿಳಿದುಕೊಂಡು ಎಲ್ಲವನ್ನೂ ಹೇಳು ಶೇಷೂ, ನಾನು ಹೇಳುವುದು ಎಲ್ಲವೂ ನಿನ್ನ ಒಳ್ಳೆಯದಕ್ಕಾಗಿಯಲ್ಲವೇ."

ಶೇಷಗಿರಿ ಮೊದಲಿನಿಂದಲೂ ಹಿಡಿದು ಅಂದಿನವರೆಗೂ ನಡೆದ ಸಮಾಚಾರವನ್ನು ಹೇಳಿದನು.

"ನೋಡು ಅವಳು ಶ್ರೀನಿವಾಸಯ್ಯನಿಗೆ ಹೇಗೆ ಮೋಸ ಮಾಡಿದಳೋ, ಹಾಗೆ ಬೇರೆ ಯಾರನ್ನಾದರೂ ನೋಡಿಕೊಂಡಮೇಲೆ ನಿನಗೂ ಹಾಗೆ ಮೋಸ ಮಾಡದೆಯೇ ಇರುತ್ತಾಳೆಯೇ ಹೇಳು? ಹಾವಿಗೆ ಹಾಲೆರೆಯಲೇಕೆ ಹೇಳು? ತಿಳಿದು ತಿಳಿದೂ ಅವಳನ್ನು ನೀನೇಕೆ ಸಾಕಬೇಕು. ಅವಳೇನು ನಿನ್ನ ಹೆಂಡತಿಯೇ? ಮದುವೆ ಮಾಡಿಕೊಂಡು ಅವಳನ್ನು ಸಾಕಿದರೆ ನಿನ್ನನ್ನು ಅವಳು ಎಷ್ಟು ಗೌರವಿಸುವುದಿಲ್ಲ! ಎಷ್ಟು ಪೂಜಿಸುವುದಿಲ್ಲ!! ಎಷ್ಟು ಪ್ರೀತಿಸುವುದಿಲ್ಲ!!! ಮುಂದೆ ನಿಮಗೆ ಮಕ್ಕಳಾದರೂ ಅವು ನಿನ್ನ ಮಕ್ಕಳೇ ಅಲ್ಲವೇ. ಈಗ ನೋಡು! ಯಾವಳೋ ಬೀದಿಯವಳು ಬಂದು ಕೆಲವು ದಿನ ನಿನ್ನ ಜೊತೆಯಲ್ಲಿದ್ದು, ಮುಂದೆ ಮಕ್ಕಳಾದರೆ, ಅವಳು ನಿನ್ನನ್ನು ಬಿಟ್ಟು ಹೋದರೆ ನಿನ್ನ ಗತಿಯೇನು? ನಿನಗೇನು ವಿದ್ಯಾವಂತ, ಬುದ್ಧಿವಂತ ಮತ್ತು ಹಣವಂತ. ಮದುವೆ ಮಾಡಿಕೋ. ಸಂಸಾರ ಮಾಡು. ನೀನು ಇವೆಲ್ಲಾ ಯೋಚನೆ ಮಾಡು ಶೇಷು!"

ಶೇಷಗಿರಿ ಯೋಚಿಸಹತ್ತಿದನು.

"ಹೌದು ರಾಧ ತನಗೂ ಮೋಸ ಬಗೆದರೇನು ಮಾಡುವುದು?

ಮತ್ತೆ ಕೇಳಿದನು.

"ಅವಳು ನನನ್ನೇ ನಂಬಿ ಬಂದಿರುವಳಲ್ಲಾ!"

"ನೀನೊಬ್ಬ ಹುಚ್ಚ. ಅವಳು ನಿನ್ನನ್ನು ನಂಬಿ ಬಂದಿರುವಳೆಂದು ನೀನು ತಿಳಿದುಕೊಂಡಿದ್ದೀಯಾ? ಅವಳು ಎಲ್ಲರ ಕೈಗೂಸು. ಎಷ್ಟೋ ಜನ ಸಾಕಲು ಮುಂದೆ ಬರುವರು ಗೊತ್ತೆ?"

"ಹಾದರೇನು ಮಾಡಬೇಕು?"

"ನಾನು ಹೇಳಿದ ಹಾಗೆ ಕೇಳು. ನನ್ನ ಜೊತೆಯಲ್ಲಿ ಬಂದುಬಿಡು. ಮದುವೆಯೂ ಆಗುತ್ತದೆ."

ಶೇಷಗಿರಿ ತೀವ್ರವಾಗಿ ಯೋಚನೆ ಮಾಡಿದ. ಹೌದು ತಂದೆ ಹೇಳುವುದೇ ಉತ್ತಮ ಎಂದು ತೀರ್ಮಾನಿಸಿದನು.

ಕೆಲಸಕ್ಕೇನು ಮಾಡುವುದೆಂದು ಯೋಚನೆ ಮಾಡಿದ, ತಂದೆ ಸಮಾಧಾನ ಮಾಡಿದರು, ಆ ಕೆಲಸ ಹೋದರೆ ಬೇರೆ ಕೆಲಸ ಸಿಗುವುದೆಂದು.

ಶೇಷಗಿರಿ, ತಂದೆಯೊಡನೆ ರಾಧೆಗೆ ಹೇಳದೆಯೇ ಊರಿಗೆ ಪ್ರಯಾಣ ಮಾಡಿದನು. ತಮ್ಮ ಪ್ರಯತ್ನ ಸಫಲವಾಗಿದ್ದಕ್ಕೆ ಅವನ ತಂದೆಯು ಆನಂದ ಪಟ್ಟರು.

## ೨೩

ದಿವಸಗಳು ಕಳೆಯುತ್ತಲೂ ರಾಧೆ ಭೀತಳಾದಳು. ತನಗೆ ಹೇಳದೆಯೇ ಶೇಷಗಿರಿ ಎಲ್ಲಿಗೆ ಹೋಗಿರುವನೆಂದು ಮನದಲ್ಲಿಯೇ ಯೋಚಿಸುತ್ತಿದ್ದಳು.

ಊರಿಗೇನಾದರೂ ಹೋಗಿರಬಹುದೇನೋ ಎಂದು ಸಮಾಧಾನ ಮಾಡಿಕೊಂಡಳು. "ಅವರೇನಾದರೂ ಮೋಸ ಮಾಡಿರಬಹುದೇನೋ" ಎಂದುಕೊಂಡಳು.

"ಇಲ್ಲ ಹಾಗೆಂದಿಗೂ ಅವರು ಮಾಡುವುದಿಲ್ಲ. ನನ್ನನ್ನು ಕಂಡರೆ ಅವರಿಗೆಷ್ಟು ಪ್ರೇಮ, ಪ್ರೀತಿ, ನನಗೆ ಮೋಸ ಮಾಡುವರೆ?" ಎಂದುಕೊಳ್ಳುವಳು.

ಅದಕ್ಕೆ ಉತ್ತರವಾಗಿ ಅವಳ ಮನಸ್ಸು ಹೇಳಿತು.

"ಅವನೇ ನಿನಗೆ ಮೋಸ ಮಾಡಿದ್ದರೆ!"

"ಛಿ ಹಾಗೆಂದಿಗೂ ಇಲ್ಲ. ಅವರದು ಮೃದು ಹೃದಯ. ಮಕ್ಕಳಂತಹ ಕಪಟವರಿಯದ ಮನಸ್ಸು."

"ನೀನೋರ್ವಳು ಹುಚ್ಚಿ. ಖಂಡಿತ ಅವನು ನಿನಗೆ ಮೋಸ ಮಾಡಿ ಓಡಿ ಹೋಗಿದ್ದಾನೆ. ಒಂದು ಬಾರಿ ನೀನು ಅವನಿಗೆ ಹೇಳಿಕೊಟ್ಟೆ. ಈಗ ಅವನು ಆ ರೀತಿ ನಡೆದುಕೊಂಡಿದ್ದಾನೆ."

"ಹೌದಿರಬಹುದು. ಹಾಗಾದರೇನುಗತಿ?"

"ಅಧೋಗತಿ!"

"ನನ್ನ ಬಾಳು ಮುಂದೆ ರೂಪುಗೊಳ್ಳುವುದು ಹೇಗೆ? ನನ್ನ ಬಾಳಿನ ಅಂತ್ಯವೇನು? ನಾನೇನು ಮಾಡುವುದು?"

"ಇದು ನಿನ್ನ ಬಾಳಿನ ಅಂತ್ಯ."

"ಜೀವನವೆಂದರೇನು?"

"ನಿನ್ನ ಜೀವನದಂತಲ್ಲ ಆ ಜೀವನ. ನಾಲ್ಕು ಜನಕ್ಕೆ ಒಳ್ಳೆಯದು ಮಾಡಿ ಮರ್ಯಾದೆಯಾಗಿ ಕಾಲ ಹಾಕುವುದೇ ಮನುಷ್ಯನ ಗುರಿ"

"ಆದರೆ ನನ್ನ ಬಾಳು ಹಾಗೆ ಆಗದೆ ಹೀಗೆ ಕೊನೆಯಾಯಿತು. ಕೈಹಿಡಿದ ಗಂಡ ಅಂದು ಆ ರೀತಿ ನಡೆದುಕೊಳ್ಳದಿದ್ದಲ್ಲಿ ನನ್ನ ಬಾಳು ಹೀಗೆ ಆಗುತ್ತಿತ್ತೆ?"

"ಆದರೂ ಅದೂ ನಿನ್ನ ತಪ್ಪು. ನಿನ್ನ ಮನಸ್ಸಿನ ಕಡಿವಾಣವನ್ನು ಬಿಗಿ ಹಿಡಿಯಬೇಕಾಗಿತ್ತು. ಅನ್ನ ತಿಂದವರ ಮನೆಗೆ ದ್ರೋಹ ಬಗೆಯ ಬಾರದಾಗಿತ್ತು. ಹಾಗೆ ಮಾಡುವುದು ನಿನಗೆ ಆಗ ಸಾಧ್ಯವಾಗಿರಲಿಲ್ಲವೆ?"

"ಆದದ್ದು ಹಾಗಿಹೋಯಿತು. ನನ್ನ .ತಪ್ಪಿಗೆ ಪ್ರಾಯಶ್ಚಿತ್ತವೇನು?"

"ತಪ್ಪು ಮಾಡಿದವರು ಎಲ್ಲಿಗೆ ಹೋಗುವರು ಗೊತ್ತಿಲ್ಲವೆ?"

"ಎಲ್ಲಿಗೆ?"

"ನರಕಕ್ಕೆ"

"ಆ ನರಕವೆಲ್ಲಿದೆ?"

"ಮನುಷ್ಯನ ತೀರ್ಮಾನಕ್ಕಾಗಿ ದೇವರು ನರಕ ಮತ್ತು ಸ್ವರ್ಗವೆಂಬ ಎರಡು ತಾಣಗಳನ್ನು ಸೃಷ್ಟಿಸಿದ್ದಾನೆ. ಸ್ವರ್ಗ ಪುಣ್ಯವಂತರಿಗೆ-ನರಕ ಪಾಪಿ ಗಳಿಗೆ. ನರಕದಲ್ಲಿ ಪಾಪ ಮಾಡಿದವರಿಗೆ ಮಾತ್ರ ಎಡೆ. ಆ ರಾಜ್ಯದ ದೊರೆಯಾದ ಯಮನು ಸ್ವಯಂ ನಿಂತು ಚಿತ್ರಗುಪ್ತನ ಸಹಾಯದಿಂದ ಆ ಮನುಷ್ಯನು ಪ್ರಪಂಚದಲ್ಲಿ, ಹಿಂದಿನ ಜೀವನದಲ್ಲಿ ಮಾಡಿದ ಪಾಪಗಳೆಲ್ಲ ವನ್ನೂ ಎಣಿಕೆ ಹಾಕಿಕೊಂಡು ಅದರಂತೆ ಕಷ್ಟಗಳನ್ನು ಕೊಟ್ಟು ಹಿಂಸಿಸಿ ಅವರು ತಮ್ಮ ತಪ್ಪುಗಳನ್ನು ತಿದ್ದಿಕೊಂಡು ಪಶ್ಚಾತ್ತಾಪಪಟ್ಟುಕೊಳ್ಳುವಂತೆ

ಮಾಡುವನು. ಆ ನರಕ ನಿನ್ನಂಥಹ ಪಾಪಿಗೆ. ನಿನಗಾಗಿ ಅಲ್ಲಿ ಸ್ಥಳವೊಂದು ಕಾದಿದೆ."

ರಾಧಳ ಮನಸ್ಸಿನಲ್ಲಿ ವಾಗ್ಯುದ್ಧವು ನಡೆಯುತಿತ್ತು.

"ಹಾಗಾದರೆ ನಾನು ಆ ನರಕಕ್ಕೆ ಹೋಗದಿರುವ ಮಾರ್ಗವಿಲ್ಲವೆ?"

"ಇದೆ!"

"ಇದೆಯೆ? ಹಾಗಾದರೆ ಅದು ಯಾವುದು? ಅದನ್ನು ನಾನು ಅನುಸರಿಸುತ್ತೇನೆ."

"ಒಂದೇ ದಾರಿ-ಪ್ರಾಯಶ್ಚಿತ್ತ."

"ಅದರಲ್ಲಿ ನಾನು ಹೇಗೆ ಹೋಗಲಿ."

"ನೀನು ದ್ರೋಹ ಬಗೆದಿದ್ದ ಸಾವಿತ್ರಿಗೆ ಮತ್ತೆ ಹೋಗಿ ಅವಳ ಕ್ಷಮಾಪಣೆ ಬೇಡಿಕೋ. ನಂತರ ನೀನು ಒಳ್ಳೆಯ ಹಾದಿ ಹಿಡಿದು ಹೋದರೆ ನಿನಗೆ ನರಕದ ಹಾದಿ ಹಿಡಿಯುವುದಿಲ್ಲ."

"ಹಾಗಾದರೆ ನಾನು ಸಾವಿತ್ರಿಯ ಬಳಿಗೆ ಹೋಗಿ ಅವಳ ಕ್ಷಮಾಪಣೆ ಬೇಡಲೆ?"

"ಬೇಡು ಹೋಗು. ನಿನಗಿರುವುದು ಅದು ಒಂದೇ ಮಾರ್ಗ."

ರಾಧಳು ಅದೇರೀತಿ ತೀರ್ಮಾನಿಸಿದಳು. ಆದರೆ ಕೆಲವು ದಿವಸಗಳು ಕಳೆದು ನೋಡಿ, ಶೇಷಗಿರಿಯು ಮರಳಿ ಬರುವನೋ ಇಲ್ಲವೊ ನೋಡಿ ನಂತರ ಹಾಗೆ ಮಾಡುವುದು ಉಚಿತ ಎಂದು ತೀರ್ಮಾನಿಸಿಕೊಂಡಳು. ದಿವಸಗಳನ್ನು ಕಳೆಯಲು ಒಂಟಿಯಾದ ಅವಳಿಗೆ ಬಹಳ ಬೇಸರವಾಗಿತ್ತು.

ಹದಿನೈದು ದಿವಸಗಳು ಕಳೆದುಹೋಯಿತು. ಅಕಸ್ಮಾತ್ ಶೇಷಗಿರಿಯಿಂದ ಕಾಗದ ಬಂತು. ಪತ್ರವನ್ನು ಒಡೆದು ನೋಡುವಲ್ಲಿ ಅದರಲ್ಲಿ ಶೇಷಗಿರಿಯ ಮದುವೆಯ ಲಗ್ನ ಪತ್ರಿಕೆ ಇತ್ತು. ಮದುವೆ ಮುಗಿದ ನಂತರ ಕಳಿಸಿದ ಕರೆಯೋಲೆ ಅದು. ಅದನ್ನು ನೋಡಿದವಳೇ ರಾಧ ಹಲ್ಲು ಕಡಿದಳು. ಕೋಪಗೊಂಡಳು. ಹೌಹಾರಿದಳು. ಏನು ಮಾಡಲೂ ಸಾಧ್ಯವಿರಲಿಲ್ಲ.

ದಿವಸಗಳು ಕಳೆಯುತ್ತಲೂ ಮನೆಯಲ್ಲಿದ್ದ ಸಾಮಾನುಗಳು ಮುಗಿದು ಹೋಯಿತು. ಮೈಮೇಲಿದ್ದ ಆಭರಣಗಳನ್ನು ಮಾರಬೇಕಾಯಿತು.

ಮಧ್ಯೆ ಮಧ್ಯೆ ಶ್ರೀನಿವಾಸಯ್ಯನ ನೆನಪು ಅವಳನ್ನು ಕಾಡಹತ್ತಿತು. ಪಾಪ! ಅವನಿಗೆ ಮೋಸ ಮಾಡಿದೆ. ಚಿನ್ನದಂತಹ ಹೆಂಡತಿಯನ್ನು ಅಗಲಿಸಿದೆ. ಹಾಲಿನಂತಹ ಸಂಸಾರವನ್ನು ಒಡೆಸಿದೆ. ಇವೆಲ್ಲವೂ ತನ್ನ ತಪ್ಪೆ. ತನ್ನ ಮನಸ್ಸು ಬಿಗಿಯಿದ್ದಿದ್ದರೆ, ಇವೆಲ್ಲವೂ ನಡೆಯುತ್ತಿತ್ತೆ? ಹಾಗೆ, ತಾನು ಮಾಡಿದ ತಪ್ಪಿಗಾಗಿ ಶೇಷಗಿರಿಯನ್ನು ತಾನು ಅಗಲಬೇಕಾಯಿತು....

ರಾಧಳ ಮನಸ್ಸಿನಲ್ಲಿ ಯೋಚನಾ ತರಂಗಗಳು ಉದ್ಭವಿಸುತ್ತಲಿತ್ತು.

ಸಾವಿತ್ರಿ ಈಗ ಎಲ್ಲಿರಬಹುದೋ ಏನೋ, ಅವಳ ಕ್ಷಮೆಯನ್ನಾದರೂ ಬೇಡಬೇಕು. ಪಾಪ. ಹೂವಿನಂತಹ ಮನಸ್ಸು ಅವಳದು. ಇಲ್ಲಿ ತನಗಿನ್ನೇನು ಕೆಲಸ. ಹೋಗಲಿ ಅಲ್ಲಿಗಾದರೂ ಹೋಗಿ ಕ್ಷಮೆಯನ್ನು ಕೇಳಿ ಹೊರಟು ಹೋಗೋಣ ಎಂದುಕೊಂಡಳು.

o o o o

ಶಶಿಧರ, ರಾಧಳ ತಮ್ಮ ಈಗ ಮೈಸೂರಿನಲ್ಲಿ ಓದುತ್ತಲಿದ್ದ. ಅವನು ಮೊದಲು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಪಾಸಾದ ಕೂಡಲೇ ಮುಂದೇನು ಮಾಡುವುದೆಂದು ಆಲೋಚಿಸಿದನು.

ರಾಧ ಹೇಳಿದಳು,

"ಮುಂದೆ ಕಾಲೇಜಿಗೆ ಹೋಗಿ ಬಿ. ಎ. ಪಾಸು ಮಾಡಿದರೆ ಒಳ್ಳೆಯದಲ್ಲವೆ?"

ಶೇಷಗಿರಿ ಹೇಳಿದನು,

"ಈಗಿನ ಕಾಲದಲ್ಲಿ ಬಿ ಎ. ಗೆ ಯಾರು ಕೇಳುತ್ತಾರೆ. ಓದಿ ಸುಮ್ಮನೆ ವ್ಯರ್ಥ. ಆದ್ದರಿಂದ ಯಾವುದಾದರೂ ಇಂಜನೀಯರ್ ಪರೀಕ್ಷೆಗೆ ಕುಳಿತರೆ ಒಳ್ಳೆಯದು." ಅದರಂತೆ ಶಶಿಧರ ಇಂಜನೀಯರ್ ಸ್ಕೂಲಿಗೆ ಅರ್ಜಿಯನ್ನು ಹಾಕಿಕೊಂಡನು.

ಶೇಷಗಿರಿ ಅವರಿವರಿಗೆ, ತಿಳಿದವರಿಗೆ ಹೇಳಿ ಸೀಟಿನ ಶಿಫಾರ್ಸು ಮಾಡುವಂತೆ ಮಾಡಿದನು. ಕಡೆಗೆ ಶಶಿಧರನಿಗೆ ಸ್ಕೂಲಿನಲ್ಲಿ ಪ್ರವೇಶ ದೊರಕಿತು.

ಮೈಸೂರು ಚನ್ನಪಟ್ಟಣಕ್ಕೆ ದೂರವಿರುವುದರಿಂದ ಶಶಿಧರನನ್ನು ಅಲ್ಲಿಯೇ ಹಾಸ್ಟೆಲ್‌ನಲ್ಲಿ ಬಿಟ್ಟು ಅವನ ಖರ್ಚಿಗೆ ಶೇಷಗಿರಿ ಹಣವನ್ನು ಒದಗಿಸುತ್ತಿದ್ದನು.

ಂ ಂ ಂ ಂ

ಶೇಷಗಿರಿ ಹೊರಟುಹೋದುದು ರಾಧಳಿಗೆ ಬಲಗೈ ಬಿದ್ದು ಹೋದಂತಾಯಿತು. ಶಶಿಧರನಿಗೆ ಹಣವನ್ನು ಒದಗಿಸಲು ತನ್ನಿಂದ ಸಾಧ್ಯವಲ್ಲದ ಮಾತು. ಮನೆಯಲ್ಲಿ ತನಗೂ ಕೂಡ ತಿನ್ನಲು ಅನ್ನವಿಲ್ಲ.

"ಶೇಷಗಿರಿ ನಂಬಿಸಿ ಮೋಸ ಮಾಡಿದನು"-ಎಂದುಕೊಳ್ಳುತ್ತಿದ್ದಳು. ಮರುಕ್ಷಣದಲ್ಲಿ

"ತಾನೂ ಕೂಡ ಶ್ರೀನಿವಾಸಯ್ಯನಿಗೆ ನಂಬಿಸಿ ದ್ರೋಹ ಬಗೆಯಲಿಲ್ಲವೆ? ತಪ್ಪಿಗೆ ತಕ್ಕ ಶಿಕ್ಷೆ" ಎಂದುಕೊಳ್ಳುತ್ತಿದ್ದಳು.

ತಾನು ಮಾಡಿದ ಅಪರಾಧಕ್ಕಾಗಿ ಮೊದಲು ಸಾವಿತ್ರಿಯ ಕ್ಷಮೆ ಬೇಡಲೇಬೇಕೆಂದು ತೀರ್ಮಾನಿಸಿಕೊಂಡಳು.

ಕಡೆಗೆ ಉಳಿದಿದ್ದ, ಶೇಷಗಿರಿ ತಂದು ಕೊಟ್ಟಿದ್ದ ಆರುನೂರ ಇಪ್ಪತ್ತು ರೂಪಾಯಿಗಳ ಸರವನ್ನು ಮಾರಲೆತ್ನಿಸಿದಳು. ಅದರಿಂದ ಅವಳಿಗೆ ಬಂದುದು ಕೇವಲ ನಾಲ್ಕುನೂರ ಐವತ್ತು ರೂಪಾಯಿಗಳ ಮಾತ್ರ.

ಆ ದುಡ್ಡಿನಲ್ಲಿ ನಾಲ್ಕುನೂರು ರೂಪಾಯಿಗಳನ್ನು ಬ್ಯಾಂಕಿಗೆ ಹಾಕಿ ಶಶಿಧರನು ಪ್ರತಿ ತಿಂಗಳೂ ಸ್ವಲ್ಪ ದುಡ್ಡನ್ನು ತೆಗೆದುಕೊಳ್ಳುವ ಹಾಗೆ ಬರೆದು ಬಿಟ್ಟಳು. ಶಶಿಧರನಿಗೆ ಈ ವಿಷಯ ತಿಳಿಯುವಂತೆ ಬರೆದು ಉಳಿದ ಐವತ್ತು ರೂಪಾಯಿಗಳನ್ನು ತೆಗೆದುಕೊಂಡು ಬೆಂಗಳೂರಿನ ಹಾದಿ ಹಿಡಿದಳು.

ಬೆಂಗಳೂರು ಸಮೀಪಿಸುತ್ತಿದ್ದಂತೆ ಅವಳ ಎದೆ ನಡುಗುತಿತ್ತು. ಶ್ರೀನಿವಾಸಯ್ಯನ ಮನೆಯಲ್ಲಿ ತನ್ನ ಜೀವನ, ಅಲ್ಲಿಯ ಕೆಲಸಗಳು ಎಲ್ಲವೂ ಜ್ಞಾಪಕಕ್ಕೆ ಬಂದು ಅವಳ ಸ್ಥೈರ್ಯವನ್ನು ಉಡಗಿಸಿದುವು.

ರೈಲಿಳಿದ ಕೂಡಲೆ ಗಾಡಿಯೊಂದು ಗೊತ್ತುಮಾಡಿಕೊಂಡು ಶ್ರೀನಿವಾಸಯ್ಯನ ಮನೆಯ ಬಳಿಗೆ ಬಂದಳು. ಆದರೆ ಅವನ ಮನೆಯ ಬಾಗಲಿಗೆ ಬೀಗ ಹಾಕಿತ್ತು. ಎಲ್ಲಿಯಾದರೂ ಹೋಗಿರಬಹುದೇನೋ ಹೊರಗೆ ಎಂದು ಕೊಂಡಳು.

ಆದರೂ ಯಾರನ್ನಾದರೂ ವಿಚಾರಿಸುವುದು ಉತ್ತಮವೆಂದು ಪಕ್ಕದ ಮನೆಯವರಲ್ಲಿ ವಿಚಾರಿಸಿದಳು. ಅಲ್ಲಿನವರ ಕಣ್ಣಿಗೆ ರಾಧ ಹೊಸಬಳಂತೆ ಕಂಡುಬಂದಳು.

"ಇಲ್ಲಿ ಶ್ರೀನಿವಾಸಯ್ಯ ಎಂಬುವರು ಇದ್ದರಲ್ಲಾ ಅವರೆಲ್ಲಿರುವರು?"

ಈ ಪ್ರಶ್ನೆಯನ್ನು ಕೇಳಿದ ಕೂಡಲೆ ಆ ಮನೆಯವರು ಆಶ್ಚರ್ಯಚಕಿತರಾದರು.

"ಅವರು ಈ ಮನೆಯನ್ನು ಬಿಟ್ಟು ಆಗಲೆ ಎರಡು ವರ್ಷವಾಗುತ್ತಾ ಬಂತು. ನಿಮಗೆ ಗೊತ್ತಿಲ್ಲವೆಂದು ಕಾಣುವುದು" ಎಂದು ಉತ್ತರಿಸಿದರು.

ಅವರ ಮನೆಯ ಜಾಡನ್ನು ತಿಳಿಯದೆ ರಾಧ ಹುಡುಕಿ ಹುಡುಕಿ ಸುಸ್ತಾದಳು.

ಉಳಿದುದೊಂದೇ ದಾರಿ.

ಎಲ್ಲಿಗಾದರೂ ಹೋಗುವುದು. ಯಾವ ಊರಿಗಾದರೂ, ಮನ ಬಂದೆಡೆ ಹೋಗುವುದು.

ತಿರುಗಿ ತಿರುಗಿ ರೈಲ್ವೆ ಸ್ಟೇಷನ್ನಿಗೆ ಹೋದಳು. ಯಾವುದೋ ಊರಿನ ರೈಲು ನಿಂತಿತ್ತು. ಕೈಯ್ಯಲ್ಲಿದ್ದ ದುಡ್ಡನ್ನು ಕೊಟ್ಟು ಟಿಕೇಟು ಕೇಳಿದಳು.

"ಯಾವ ಊರಿಗೆ ಟಿಕೇಟ್?"

"ಈ ದುಡ್ಡಿಗೆ ಎಲ್ಲಿಯವರಿಗೆ ಹೋಗಬಹುದೋ ಅಲ್ಲಿಯವರೆಗೆ ಕೊಡಿ."

ಇವಳೆಲ್ಲೋ ವಿಚಿತ್ರವೆಂದುಕೊಂಡು ಪೂನಾಗೆ ಹೋಗಲು ಟಿಕೇಟ್ ಕೊಟ್ಟನು.

ರಾಧ ರೈಲು ಹತ್ತಿ ಕುಳಿತಳು.

ರೈಲು ತನ್ನ ಕೂಗು ಕೂಗಿ ಮುಂದೆ ಚಲಿಸಿತು.

ರಾಧಳು ವಿಚಾರಮಗ್ನಳಾಗಿ ತೇಲಿಹೋದಳು.

"ಎಲ್ಲಿಗೆ ಹೋಗುತ್ತಿರುವುದು?"

"ಎಲ್ಲೋ ಒಂದು ಜಾಗಕ್ಕೆ!"

"ಅಲ್ಲಿಗೇತಕ್ಕೆ ಹೋಗಬೇಕು?"

"ನನ್ನ ಮನಸ್ಸಮಾಧಾನಕ್ಕಾಗಿ!"

"ಅಲ್ಲಿಗೆ ಹೋದರೆ ಸಮಾಧಾನವಾಗುವುದೇನು?"

"ಪ್ರಯತ್ನ ಮಾಡಿ ನೋಡುತ್ತೇನೆ!"

"ನಿನಗೆ ಯಾತರ ಅಸಮಾಧಾನ?"

"ಕೈಸೇಡಿ ಬಂದಿದ್ದ ಶ್ರೀನಿವಾಸಯ್ಯನಿಗೆ ದ್ರೋಹ ಬಗೆದೆ. ಅಕ್ಕಸಿಗೆ ಎರಡು ಮಾಡಿದೆ."

"ಅದು ನಿನ್ನ ತಪ್ಪೇನು? ಅದು ಅವನದೇ ಅಲ್ಲವೇ! ಬೆಂಕಿಯೆಂದು ತಿಳಿದೂ ಹಾರಿ ಬಂದ ಪತಂಗ!"

ಅಲ್ಲ. ಆ ಕಾರ್ಯಕ್ಕೆ ಒಪ್ಪಿದವಳು ನಾನು. ಅದಕ್ಕೆ ಅವಕಾಶ ನೀಡದಿದ್ದರೆ ಇದು ನಡೆಯುತ್ತಿರಲಿಲ್ಲ."

"ಹೋಗಲಿ. ಅಷ್ಟಕ್ಕಾಗಿ ನಿನ್ನ ಭವಿಷ್ಯವನ್ನು ಹಾಳು ಮಾಡಿಕೊಳ್ಳ ಲೆತ್ನಿಸುವೆಯಾ?"

"ಹಾಗೆಂದರೇನು?"

"ನಿನಗೆ ರೂಪವಿದೆ....ಯೌವನವಿದೆ....ಸಹಸ್ರಾರು ಮಂದಿ ನಿನ್ನನ್ನು ಆದರಿಸಲು ಮುಂದೆ ಬರುವರು!"

"ಅದು ನನಗೆ ಬೇಕಾಗಿಲ್ಲ. ಅದು ನಾಯಿಯ ಬಾಳು. ನರಕದ ಕೂಪ. ಆ ಹೊಲಸು ಬಾಳಿಗಿಂತ ಸಾಯುವುದೇ ಮೇಲು."

"ಯೋಚನೆ ಮಾಡು...."

"ಸಾಧ್ಯವಿಲ್ಲ."

"ಹಾಗಾದರೆ ಈಗೇನು ಮಾಡುವಿ?"

"ಮೊದಲಿನಂತೆ ನಾನು ಒಂದು ತುತ್ತು ಅನ್ನಕ್ಕಾಗಿ ಕೆಲಸ ಮಾಡಿ ಸಂಪಾದಿಸುವೆನು. ಹೊಸ ಜನ್ಮದಿಂದ ನವ ಬಾಳನ್ನು ಆಶ್ರಯಿಸುವೆನು!"

ರೈಲು ಮುಂದೆ ಮುಂದೆ ಸಾಗಿದಂತೆ, ಮರ ಗಿಡಗಳ ಓಟದ ಸ್ಪರ್ಧೆಯು ಸಾಗಿದಂತೆ, ರಾಧಳ ಮನದಲ್ಲಿ ವಿಚಾರ ವಾಹಿನಿಗಳು ತರಂಗ ತರಂಗವಾಗಿ ಏಳುತ್ತಿದ್ದುವು.

ಸಾವಿತ್ರಿ ಏನಾದಳೋ, ಶ್ರೀನಿವಾಸಯ್ಯನೊಂದಿಗೆ ಮತ್ತೆ ಸಂಸಾರ ಮಾಡುತ್ತಿರುವಳೋ ಏನೋ....ದೇವರು ಅವರೀರ್ವರನ್ನು ಸುಖವಾಗಿಟ್ಟಿರಲಿ....

ಗತಿಸಿಹೋದ ನೆನಪುಗಳನ್ನು ಬದಿಗೊತ್ತಿ ರಾಧ ಕಿಟಕಿಯಾಚೆ ಇಣುಕಿ ದಳು.

ಪೈರು ಪಚ್ಚೆಗಳು ಸುತ್ತಲೂ ಸಮೃದ್ಧಿಯಾಗಿ ಬೆಳೆದು ನಿಂತಿದ್ದುವು. ದೂರದಲ್ಲಿದ್ದ ಗುಡ್ಡ ಬೆಟ್ಟಗಳು ಒಂದಾದ ಮೇಲೊಂದು ಹಿಂದ ಹಿಂದಕ್ಕೆ ಹೋಗುತ್ತಿದ್ದುವು. ರೈಲಿನ ನಡಿಗೆಯ ಶಬ್ದಕ್ಕೆ ಹೊಂದಿಕೊಂಡು, ಮರಗಳ ಮೇಲೆ ಪಕ್ಷಿಗಳು ಕೂಗುತ್ತಿದ್ದ ಶಬ್ದವು ವಾದ್ಯದೊಂದಿಗೆ ನುಡಿಸಿದ ಸಂಗೀತ ದಂತಿತ್ತು.

ರಾಕ್ಷಸನಂತೆ ಗುಡ್ಡ ಬೆಟ್ಟಗಳ ನಡುವೆ ರೈಲು ಮುನ್ನುಗ್ಗುತ್ತಿತ್ತು. ಅದರಂತೆ ರಾಧಳ ಮನಸ್ಸೂ ಕೂಡ ಹೊಸದಾಗಿ ನವಜೀವನವನ್ನು ಅರಸುತ್ತಾ ಮುನ್ನುಗ್ಗುತಿತ್ತು.

## ೨೪

ಶ್ರೀನಿವಾಸಯ್ಯನಿಗೆ ಮದ್ರಾಸು ಬೇಸರವಾಗುತ್ತಾ ಬಂತು. ತನ್ನವ ರೆನ್ನುವರು ಅಲ್ಲಿ ಇರಲಿಲ್ಲ. ಕರೆದು ಇಡುವವರು-ಕೈ ಹಿಡಿದು ಆದರಿಸು

ವವರು ಯಾರೂ ಇಲ್ಲ. ಕೆಲಸಮಾಡಿ ಕೈಗೆ ಬಂದ ದುಡ್ಡಿನಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದನು. ಯಾವುದೋ ಹೋಟೇಲಿನ ರೂಮೊಂದರಲ್ಲಿ ಕಾಲ ಹಾಕುತ್ತಿದ್ದ. ಸಾವಿತ್ರಿಯನ್ನು ಕಾಣುವೆನೆಂಬ ಬರವಸೆಯಾದರೂ ಇದುವರೆಗೆ ಇತ್ತು. ಆದರೆ ಈಗ........ಸಾವಿತ್ರಿಯನ್ನು ನೋಡಿ ಆಗಲೆ ಎಷ್ಟೊ ವರ್ಷಗಳಾಗಿತ್ತು. ಅವಳು ಬದುಕಿದ್ದಾಳೆಯೋ ಅಥವಾ ಇಲ್ಲವೋ ಅದೂ ಅವನಿಗೆ ಸಂದೇಹವಾಗಿತ್ತು. ಅಂತೂ ಕಡೆಗೆ ಏನಾದರೂ ಸರಿ ಬೆಂಗಳೂರನ್ನು ಮುಟ್ಟಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡನು.

ಅಲ್ಲಿ ಅವನಿಗೆ ಸ್ನೇಹಿತರುಗಳೂ ಕೂಡ ಇರಲಿಲ್ಲ. ಮಾಡಿಕೊಳ್ಳು ವುದಕ್ಕೆ ಇಚ್ಛೆಯೂ ಇರಲಿಲ್ಲ. ಏನೋ ಒಂದು ತರಹ ಜೀವನದಲ್ಲಿ ಜಿಗುಪ್ಸೆ. ವರ್ಷಗಳು ಉರುಳಿ ಹೋದ ಹಾಗೆ ಅವನ ಮುಖವೂ ಬದಲಾಯಿಸಿ ಹೋಗು ತಿತ್ತು. ಮುಖದಲ್ಲೆಲ್ಲಾ ಗಡ್ಡ–ಮೀಸೆಗಳು ಬೆಳೆದು ಹಳೆಯ ಶ್ರೀನಿವಾಸಯ್ಯ ಎಂದು ಗುರುತಿಸಲು ಸಾಧ್ಯವಾಗದೆ ಇತ್ತು. ಅವನಿಗೆ ಯಾವುದರ ಮೇಲೆಯೂ ಆಶೆಯಿರಲಿಲ್ಲ. ತಾನು ನಂಬಿಕೊಂಡಿದ್ದ ರಾಧ........ಅವಳೂ ಮೋಸ ಮಾಡಬೇಕೆ? ತನ್ನ ಆಶ್ರಯದ ಹೆಣ್ಣು ತನಗೇ ನಂಬಿಕೆ ಕೊಟ್ಟು ದ್ರೋಹ ಮಾಡಬೇಕೆ? ತಾನು ಸಾವಿತ್ರಿಗೆ ಎಷ್ಟು ದ್ರೋಹ ಮಾಡಿದ್ದನೋ ಅಷ್ಟೆ ರಾಧ ಅವನಿಗೆ ಮಾಡಿದ್ದಳು. ಇದ್ದೆ ಇದೆಯಲ್ಲವೇ! ಮಾಡಿದ್ದುಣ್ಣೊ ಮಹಾರಾಯ! ಎಂದು. ತಾನು ಮಾಡಿದುದಕ್ಕಾಗಿ ತಾನು ಅನುಭವಿಸಲೇ ಬೇಕು. ರಾಧ ಅವನಿಗೆ ಮೋಸ ಮಾಡುವಳೆಂದು ಅವನು ಸ್ವಪ್ನದಲ್ಲೂ ನಿರೀಕ್ಷಿಸಿರಲಿಲ್ಲ. ಅಂತೂ ಹೇಗೋ ದುರ್ಘಟನೆ ನಡೆದು ಹೋಯಿತು. ತಾನೆಷ್ಟು ಆಗ ಅವಳಿಗೆ ಕಷ್ಟ ಪಟ್ಟಿರಬಹುದು? ಅದೊಂದಾದರೂ ಅವಳ ಮನಸ್ಸು ತಿರಿಗಿಸಿತೇ! ಅವಳನ್ನು ಸಾಕಿದುದು ಹಾವನ್ನು ತೊಡೆಯ ಮೇಲೆ ರಿಸಿಕೊಂಡು ಹಾಲೆರೆದ ಹಾಗೆ. ಅಂತೂ ತನ್ನ ಶಕ್ತಿಯನ್ನು ತೋರಿಸಿಯೇ ಬಿಟ್ಟಳು. ಇವಳನ್ನು ನಂಬಿದ್ದಕ್ಕಾಗಿಯಲ್ಲವೇ ಸಾವಿತ್ರಿಯನ್ನು ಕಳೆದು ಕೊಂಡುದು. ಹೋಗಲಿ ಈಗ ಸಾವಿತ್ರಿಯನ್ನು ಕಾಣುವ ಯೋಗ್ಯತೆ ಯಾದರೂ ಎಲ್ಲಿದೆ? ಸಾವಿತ್ರಿಯು ಪುಟವಿಟ್ಟ ಚಿನ್ನದಂತೆ. ಶ್ರೀನಿವಾಸಯ್ಯನ ಮನಸ್ಸಿನಲ್ಲಿ ಆಂದೋಳನದ ಹೋರಾಟ ನಡೆಯುತಿತ್ತು.

೨೫

ಇದ್ದ ಒಂದೆರಡು ಬಟ್ಟೆಗಳನ್ನು ಕಟ್ಟಿಕೊಂಡು ಶ್ರೀನಿವಾಸಯ್ಯ ಬೆಂಗಳೂರಿಗೆ ರೈಲು ಹತ್ತಿದ. ರೈಲು ಮುಂದೋಡುತ್ತಿದ್ದಂತೆ ಅವನಿಗೆ ಹಿಂದಿನ ಸುಖ ಸಂಸಾರ ಚಲನ ಚಿತ್ರ ಪರದೆಯ ಮೇಲೆ ಚಿತ್ರ ಹಿಡಿದಂತೆ ಕಾಣಿಸಿಕೊಳ್ಳುತಿತ್ತು. ಸುತ್ತಲಿನ ಪ್ರಕೃತಿಯು ಅವನನ್ನು ಸೆರೆ ಹಿಡಿಯಲಿಲ್ಲ. ಓಡಿಹೋಗುವ ಗುಡ್ಡ ಬೆಟ್ಟಗಳು, ಗಿಡಮರಗಳು ಅವನ ಮನಸ್ಸಿಗೆ ಬರಲೇ ಇಲ್ಲ. ಮಳೆಯ ಹನಿ ಆಗತಾನೆ ಬಿದ್ದು ಅಚ್ಚ ಎಲೆಯ ಮೇಲಿರುವಹಸುರು ಬಣ್ಣದ ಪ್ರಕೃತಿ ದೇವಿಯ ಸೆರಗು ಅವನನ್ನು ಹಿಂದಕ್ಕೆ ಮನಸ್ಸನ್ನು ಕರೆಯಲಾರದಾಯಿತು. ಅವನ ಮನಸ್ಸಿನಲ್ಲಿ ಯೋಚನಾತರಂಗಗಳು ಒಂದರ ಮೇಲೊಂದು ಏಳುತ್ತಿತ್ತು. ನೀರು ತುಂಬಿದ ಒಂದು ಕೊಳಕ್ಕೆ ಕಲ್ಲನ್ನೆಸೆದಾಗ ನೀರು ಅಲುಗುವಂತೆ ಅವನ ಮನಸ್ಸು ಎಷ್ಟೋ ಭಾಗವಾಗಿತ್ತು.

ಅಂತೂ ಬೆಂಗಳೂರು ಸಮೀಪಿಸಿದಂತೆ ಅವನ ಮನಸ್ಸಿನಲ್ಲಿ ಯಾವುದೋ ಹರ್ಷ–ಆದರ ತರುತಿತ್ತು. ಅವನ ಮನಸ್ಸು ಉದ್ವೇಗದಿಂದ ಮೆಲುಕುತಿತ್ತು. ಅಂತೂ ಬೆಂಗಳೂರು ಕಡೆಗೆ ಬಂದೇ ಬಂತು. ಶ್ರೀನಿವಾಸಯ್ಯ ಇಳಿದನು ರೈಲಿನಿಂದ. ಅಲ್ಲಿ ನೆರೆದಿರುವ ಜನಜುಂಗುಳಿ ಅವನಿಗೆ ಪೂರ್ತಿ ಬೇಸರ ತರುವಂತಿತ್ತು. ನೆಟ್ಟಗೆ ಊರಿನಲ್ಲಿ ಯಾವುದೋ ಹೊಟೇಲಿನ ರೂಮಿನಲ್ಲಿ ವಾಸಕ್ಕೆ ಇಳಿದುಕೊಂಡ. ಒಂದು ದಿನ ಕಳೆದ ಮೇಲೆ ಬೆಂಗಳೂರಿನ ಹವ ಅವನಿಗೆ ಜುಗುಪ್ಸೆ ತಂದಿತು. ಅಂತೂ ಬಹಳ ಬೇಸರದಿಂದಲೇ ಕಾಲವನ್ನು ಎರಡು ಕೈಗಳಿಂದ ನೂಕುತ್ತಾ ಕಾಲ ಹಾಕಲಾರಂಭಿಸಿದ.

ವ್ಯರ್ಥವಾಗಿ ಕಾಲವನ್ನೆಷ್ಟು ದಿನ ಕಳೆಯಲು ಸಾಧ್ಯ. ಅಲ್ಲಲ್ಲಿ ಕೆಲಸಕ್ಕಾಗಿ ಅಲೆದಾಡಿದ. ಸರಿ ಹೊತ್ತಿಗೊತ್ತಿಗೆ ಬೇಕಾಗಿದ್ದ ಊಟಕ್ಕಾಗಿ 'ಹಣದ' ಅವಶ್ಯಕವಿತ್ತು. ಅಂತೂ ಅದೇ ಓಡಾಟದಲ್ಲಿ ಕೆಲವು ದಿನ ಕಳೆಯಿತು.

ಹೇಗೋ ಅವನಿಗೆ ಬಿಸ್ಕೀಮಿಲ್ಲಿನಲ್ಲಿ ಕೆಲಸ ಸಿಕ್ಕಿತು. ಸಿಕ್ಕಿದುದು ಅದೂ ಅವನ ಅದೃಷ್ಟವೇ. ತಿಂಗಳಿಗೆ ಮೂವತ್ತು ರೂಪಾಯಿಗಳು ಅಷ್ಟೆ! ಇರುವ ಒಬ್ಬನಿಗೆ ಇನ್ನೆಷ್ಟು ಬೇಕು. ಹೇಗೋ ಕಾಲ ಕಳೆಯಲಾರಂಭಿಸಿದನು.

o o o o

ಸಾವಿತ್ರಿ ತನ್ನ ಪತ್ನಿಯನ್ನು ನೋಡಿ ಆಗಲೆ ಏಳು-ಎಂಟು ವರ್ಷವಾಯಿತು. ಪತಿಯ ವಿಚಾರವನ್ನು ಮಾಡಿ ಮಾಡಿ ಬೇಸತ್ತಿದ್ದಳು. ಅವರಿಗೇನೋ, ರಾಘಳೊಡನೆ ಸುಖವಾಗಿ ಸಂಸಾರ ಮಾಡಿಕೊಂಡಿರಬಹುದು. ಮಕ್ಕಳೆಷ್ಟು ಇದಾರೋ ಏನೋ! ಅಂತೂ ಆ ಸುಖ ತನಗೆ ಅನುಭವಿಸಲಿಕ್ಕೆ ಇಲ್ಲ. ಎಲ್ಲಕ್ಕೂ ಹಣೆಯ ಮೇಲೆ ಬರೆದಿರಬೇಕಲ್ಲವೆ! ಹಣೆಯಲ್ಲಿ ಕುಂಕುಮ ಇದ್ದೂ ಇಲ್ಲವಾಗಿದೆ.

ಸಾವಿತ್ರಿಯ ತಂದೆ ರಾಮುಸ್ವಾಮಿಗಳು ಬಹಳ ವೃದ್ಧರಾಗಿದ್ದರು. ಅವರನ್ನೂ ಅಷ್ಟು ಚಿಂತೆ ಕಾಡುತಿತ್ತು. ಪತ್ನಿವಿಯೋಗ ಹೋದರೆ ಹೋಗಲಿ. ಆದರೆ ಇದ್ದ ಒಬ್ಬಳೇ ಮಗಳು. ಅವಳ ತಲೆಯ ಮೇಲೂ ಕಲ್ಲು ಬಿತ್ತು. ಆದರೂ ಅವಳನ್ನು ಕೆಲವು ವೇಳೆ ಆಕ್ಷೇಪಿಸುತ್ತಿದ್ದರು.

"ನೀನು ಬಿಟ್ಟು ಬರದಾಗಿತ್ತು ಸಾವಿತ್ರಿ! ಇನ್ನೂ ಸ್ವಲ್ಪ ದಿನ ಇದ್ದು ನೋಡಬೇಕಿತ್ತು. ಆತುರ ಪಡಬಾರದಾಗಿತ್ತು."

ಸಾವಿತ್ರಿಗೆ ಪುತ್ತೆ ಜ್ಞಾಪಕ ತರುತ್ತಿತ್ತು. ಮನಸ್ಸು ಹೇಳುತ್ತಿತ್ತು. "ಹೌದು, ನಾನು ಆತುರ ಪಡಬಾರದಾಗಿತ್ತು. ಈಗ ಯಾರು ಅನುಭವಿಸುತ್ತಿರುವುದು? ಹೆಂಡತಿಯಾದವಳು ಗಂಡನ ಸಮಸ್ತ ವರ್ತನೆಯನ್ನೂ ಸಹಿಸದೆ ಹೋದರೆ ಸಂಸಾರ ನುಚ್ಚುನೂರು ಆಗುವುದು ಖಂಡಿತ."

ಸಾವಿತ್ರಿಗೆ ತಾನು ಮಾಡಿದ ಕೆಲಸ ತಪ್ಪು ಎಂದುಕೊಳ್ಳುತ್ತಿದ್ದಳು. ಆದರೆ ಆಗಿಹೋಯಿತಲ್ಲಾ. ನೆನಸಿಕೊಂಡರೆ ಹಿಂತಿರುಗಿ ಬರುವುದೆ?

ಸಾವಿತ್ರಿಯ ದುಃಖ ಉಮ್ಮಳಿಸುತಿತ್ತು. ಅವಳ ದುಃಖ ನೋಡಿದ ಕೂಡಲೆ ರಾಮಸ್ವಾಮಿಗಳೂ ಕಣ್ಣೀರಿಡುತ್ತಿದ್ದರು. ಅವರೂ ಸಮಾಧಾನ ಮಾಡು ತ್ತಿದ್ದರು. ಅಂತೂ ಮಕ್ಕಳನ್ನು ನೋಡಿದಾಗಲೆಲ್ಲಾ ಹಿಂದಿನ ಜ್ಞಾಪಕ ಮರಳುತಿತ್ತು.

ಹಿಂದೆ ಶ್ರೀನಿವಾಸಯ್ಯನೊಡಗೂಡಿ ಕಳೆದ ವರ್ಷದ ದಿವಸಗಳು ನೆನಪಿಗೆ ಬರುತ್ತಿದ್ದವು. ಅವರೊಡನೆ ಆಡಿ-ಪಾಡಿ ಬಾಳ ಜೀವನದ ಜೇನನ್ನು ಸವಿದ ದಿವಸಗಳು ನೆನಪಿಗೆ ಬಂದೊಡನೆ ಅವಳ ದುಃಖ ಮರುಕಳಿಸುತಿತ್ತು. ಎಷ್ಟೊ ಬಾರಿ ಅವರ ನಡತೆಗೆ ಸಾವಿತ್ರಿ ದೂರು ಹೋಗಿದ್ದಳು. ದೇವರಂತಹ ಪತಿ-ಸತಿಗೆ ಹೀಗೆ ಮಾಡಬಹುದೇ ?

ಸಾವಿತ್ರಿ ಯೋಜಿಸುತ್ತಾ, "ಮತ್ತೆ ಅವರ ಬಳಿಗೆ ಹೋಗಿ ಕ್ಷಮಾಪಣೆ ಯನ್ನು ಕೇಳುವುದು ಉಚಿತವೇ" ಎಂದುಕೊಳ್ಳುತ್ತಿದ್ದಳು.

ಆದರೆ ಮರುಕ್ಷಣದಲ್ಲಿ ತಾನು ಕಣ್ಣಾರೆ ಕಂಡುಬಂದ ದೃಶ್ಯವನ್ನು ನೆನಪು ಮಾಡಿಕೊಂಡ ಕೂಡಲೇ ರೋಷ, ಕೋಪ, ತಿರಸ್ಕಾರ ಅವಳ ನರನಾಳಗಳಲ್ಲಿ ಉದ್ಭವವಾಗುತ್ತಲಿತ್ತು.

"ಖಂಡಿತ ಹೋಗಲೇ ಬಾರದು. ಈಗ ಅವರಿಗೆ ನಾನು ಬೇಕಾಗಿಲ್ಲ. ನನ್ನ ಸನ್ನಿಹದಿಂದ ಅವರಿಗೆ ಆಗುವ ಸುಖವಾದರೂ ಏನು ? ಆ ರಾಧ.... ಅವಳೇ ಅವರಿಗೆ ಸುಖವನ್ನು ಕೊಡುತ್ತಿರುವಾಗ ತನ್ನಿಂದ ಆಗುವ ಪ್ರಯೋ ಜನವಾಗುವುದಾದರೂ ಏನು ?........

ಅಂದು ಅವಳಿಗೆ ತಾನು ಆಶ್ರಯ ಕೊಡಬಾರದಾಗಿತ್ತು. ಒಳ್ಳೆಯವ ಳಾಗಿ ಮನೆಗೆ ಬಂದು ಕಡೆಗೆ ಆಶ್ರಯ ಕೊಟ್ಟವರಿಗೇ ಎರಡು ಬಗೆದಳು ಆ ದ್ರೋಹಿ ರಾಧ. ಎಲ್ಲವೂ ತನ್ನ ಪೂರ್ವ ಜನ್ಮದ ಕರ್ಮ."

"ಪಾಪ ಈ ಮಕ್ಕಳಾದರೂ ತಂದೆಯಿಲ್ಲದೆಯೇ ಹೇಗೆ ತಾನೇ ಜೀವಿಸ ಬಲ್ಲುವು ! ತಂದೆ ಬದುಕಿದ್ದೂ ಇಲ್ಲದಂತಾಗಿ ಹೋಯಿತು. ತಾನು ಜೀವಿಸ

ಬೇಕಾದರೂ ಏಕೆ? ಯಾವ ಸುಖವನ್ನು ಅನುಭವಿಸಲಿಕ್ಕಾಗಿ! ಮಕ್ಕಳಿಗಾದರೂ ಬದುಕಬೇಕು! ಅವುಗಳನ್ನು ಮುಂದೆ ಅಭಿವೃದ್ಧಿ ಹೊಂದಿಸುವುದಕ್ಕಾಗಿಯಾದರೂ ತಾನು ಜೀವಿಸಲೇಬೇಕು. ಅವುಗಳನ್ನು ಓದಿಸಿ ವಿದ್ಯಾವಂತರಾಗಿಮಾಡಿ ಒಳ್ಳೆಯ ಸ್ಥಾನವನ್ನು ಗಳಿಸಿಕೊಡಬೇಕು. ಅದೇ ತನ್ನ ಕರ್ತವ್ಯ. ಅದೇ ತನ್ನ ಮುಖ್ಯ ಗುರಿ."

ಸಾವಿತ್ರಿ ಹಗಲಿರಳೂ ಯೋಚಿಸುತ್ತಿದ್ದಳು. ತನ್ನ ಕರ್ಮಕ್ಕೆ ಮನನೊಂದು ಮಕ್ಕಳಿಗಾದರೂ ಬದುಕಬೇಕೆಂಬ ಕಂಕಣ ತೊಟ್ಟು ಜೀವನದ ಸಮುದ್ರದಲ್ಲಿ ಅಲೆಗಳನ್ನು ತಪ್ಪಿಸಿಕೊಳ್ಳುತ್ತಾ ಮುನ್ನುಗ್ಗತೊಡಗಿದಳು.

## ೨೬

ಶಂಕರ ರಾಮಸ್ವಾಮಿಗಳ ಇಚ್ಛೆಯಂತೆ ಡಾಕ್ಟರ್ ಪದವಿಯನ್ನು ಕೈಗೊಳ್ಳಲು ಎಲ್.ಎಂ.ಪಿ. ಗಾಗಿ ಮೆಡಿಕಲ್ ಸ್ಕೂಲ್‌ಗೆ ಸೇರಿಕೊಂಡಿದ್ದನು. ಅವನಿಗೆ ವಯಸ್ಸಾದಂತೆಲ್ಲಾ ಸಾವಿತ್ರಿಯಿಂದ ತಂದೆಯ ನಡತೆಗಳು ಸೂಕ್ಷ್ಮವಾಗಿ ತಿಳಿಯತೊಡಗಿತು.

ಶಂಕರ ವಯಸ್ಸಿಗೆ ಬಂದಂತೆಲ್ಲಾ ತನ್ನ ತಂದೆಯ ತಪ್ಪನ್ನು ಯೋಚಿಸುತ್ತಿದ್ದನು. ಅವನಿಗೆ ಯಾರೂ ಅಷ್ಟು ಜನಗಳು ಪರಿಚಯವಿರಲಿಲ್ಲ. ತನ್ನ ಓದಾಯಿತು–ತಾನಾಯಿತು.

ಶ್ರೀನಾಥ ಶಂಕರನ ಸಹಪಾಠಿ. ಶಂಕರನನ್ನು ನೋಡಿದ ಸಮಯದಲ್ಲೆಲ್ಲಾ ಅವನೊಡನೆ ಮಾತನಾಡಬೇಕೆಂಬ ಇಚ್ಛೆ. ಎಷ್ಟೋ ಬಾರಿ ಅವನೊಡನೆ ಮಾತನಾಡಬೇಕೆಂಬ ಕುತೂಹಲದಿಂದ ಮುನ್ನುಗ್ಗಿದ್ದ. ಆದರೆ ಶಂಕರ ಪ್ರಶ್ನೆಗೆ ಉತ್ತರಕೊಟ್ಟು ಮಾತನ್ನು ನಿಲ್ಲಿಸಿಬಿಟ್ಟಿದ್ದ.

ಒಂದು ದಿನ ಆಗತಾನೆ ತರಗತಿಯಿಂದ ಹೊರಬಿದ್ದ. ಶ್ರೀನಾಥ ಅವನನ್ನು ಹಿಂಬಾಲಿಸಿ, ತೀರ ಸಮೀಪವಾದ ಮೇಲೆ ಕೂಗಿದನು. ಶಂಕರ ಕೂಗಿದವರನ್ನು ನೋಡಲು ಹಿಂತಿರುಗಿ ನೋಡಿದ. ಶ್ರೀಧರನನ್ನು ನೋಡಿ ಶಂಕರ ಕೂಡಲೆ ನಿಂತ. ಶ್ರೀನಾಥ ಕೇಳಿದ:

"ಮನೆಗೆ ಹೊರಟಿರೇನು ?"

"ಹೌದು"

"ಪರೀಕ್ಷೆ ಸಮೀಪಕ್ಕೆ ಬರುತ್ತಾ ಇದೆ. ಹೇಗೆ ಓದುತ್ತಿರುವಿರಿ ?"

"ಏನೋ ತಕ್ಕಮಟ್ಟಿಗೆ. ತನ್ನ ಕೈಲಾದಷ್ಟೂ ನಾನು ಪ್ರಯತ್ನ ಪಡುತ್ತಿದ್ದೇನೆ. ನೀವು ಹೇಗೆ ಓದುತ್ತಿರುವಿರಿ ?"

"ನಾನೂ ಅಷ್ಟೆ !"

"ನಿಮ್ಮ ಮನೆ ಇಲ್ಲಿಗೆ ಬಹಳ ದೂರವೇನು ?"

"ಇಲ್ಲ. ಕೇವಲ ಅರ್ಧ ಘಂಟೆ ನಡಿಗೆ ಅಷ್ಟೆ."

"ನೀವು ಯಾಕೆ ಅಷ್ಟಾಗಿ ಯಾರ ಜೊತೆಯಲ್ಲಿ ಬೆರೆಯುವುದಿಲ್ಲ?"

"ಹಾಗಲ್ಲ ಶ್ರೀನಾಥ. ಇಲ್ಲಿಯ ಹುಡುಗರು ಹೇಗೆ ಅಂತೀರಿ. ಕೇವಲ ಡಂಬಾಚಾರ. ಅವರ ನಡತೆ ಎಲ್ಲಾ ನನಗೇಕೋ ಹಿಡಿಸುವುದಿಲ್ಲ."

"ನಿಜ ಶಂಕರ್. ಅದಕ್ಕೇ ನಾನೂ ಅಷ್ಟಾಗಿ ಬೆರೆಯುವುದಿಲ್ಲ. ಇವರೇನೋ ಮಹಾ ದೊಡ್ಡ ಮನುಷ್ಯರಂತೇ ವರ್ತಿಸುತ್ತಾರೆ. ಅದಕ್ಕೆ ತಕ್ಕ ಹಾಗೆ ನಡತೆಯಿಲ್ಲ, ಗಾಂಭೀರ್ಯವಿಲ್ಲ."

"ನಿಮ್ಮ ಮನೆ ಎಲ್ಲಿದೆ ?"

"ಇಲ್ಲೇ ಚಾಮರಾಜಪೇಟೆ ಮೂರನೇ ಮೈನ್‌ರೋಡ್‌ನಲ್ಲಿ ರೂಮ್‌ನಲ್ಲಿದ್ದೇನೆ."

"ನಿಮ್ಮ ತಂದೆ–ತಾಯಿಗಳೆಲ್ಲಿದ್ದಾರೆ ?"

"ಚಿಕ್ಕಂದಿನಲ್ಲೇ ತೀರಿಹೋದರು. ನಮ್ಮ ಚಿಕ್ಕಪ್ಪನವರ ಮನೆಯಲ್ಲಿ ಬೆಳೆದೆ. ಈಗ ನಾನು........"

"ಹಾಗಾದರೆ ಸ್ಕೂಲ್ ಫೀಸು ಮತ್ತು ಖರ್ಚು ?"

"ಕೆಲವು ಹುಡುಗರಿಗೆ ಪಾಠ ಹೇಳಿಕೊಡ್ತಿದ್ದೀನಿ. ಅಲ್ಪ ಸ್ವಲ್ಪ ಬರುತ್ತೆ."

ಅಷ್ಟರಲ್ಲಿ ಶಂಕರನ ಮನೆಯು ಸಮೀಪಿಸಿತು. ಶಂಕರ ಹೇಳಿದ,

"ಇದೇ ನಮ್ಮ ಮನೆ."

ಶ್ರೀನಾಥ ನೋಡಿದ, ಸುಮಾರಾಗಿದ್ದ ಮನೆ. ಮನೆಯ ಮುಂದೆ ಸಣ್ಣ ಕೈತೋಟ, ಹೂವು ಕಾಯಿಗಳು ಬೆಳೆದಿದ್ದುವು. ಮನೆಯ ಮುಂದಿರುವ ಆ ತೋಟದಿಂದ ಒಂದು ಆಕರ್ಷಣೆಯಿತ್ತು.

"ಬನ್ನಿ ಒಳಗೆ" ಶಂಕರ ಕೇಳಿದ.

ಗೇಟಿನ ಚಿಲುಕವನ್ನು ತೆಗೆದುಕೊಂಡು ಶಂಕರ ಶ್ರೀನಾಥನೊಂದಿಗೆ ಒಳಗೆ ಹೊರಟನು. ತನ್ನ ರೂಮಿನೊಳಗೆ ಕರೆದುಕೊಂಡುಹೋಗಿ ಕುರ್ಚಿಯ ಮೇಲೆ ಕೂಡಿಸಿದ. ಸುತ್ತಲೂ ನೋಡಿ ಶ್ರೀನಾಥ ಕೇಳಿದ.

"ಇದು ನಿಮ್ಮ ಸ್ವಂತ ಮನೆಯೇ ?"

"ಹೌದು, ಇದು ನಮ್ಮ ತಾತನವರದು. ಸಧ್ಯಕ್ಕೆ ನಾವು ಇಲ್ಲಿದ್ದೇವೆ."

ಶಂಕರ ಒಳಗೆ ಹೋಗಿ ಎರಡು ಕಪ್ ಕಾಫಿಯನ್ನು ತೆಗೆದುಕೊಂಡು

ಬಂದು, ಒಂದನ್ನು ಶ್ರೀನಾಥನಿಗೆ ಕೊಟ್ಟನು ಮತ್ತೊಂದನ್ನು ತಾನು ತೆಗೆದು ಕೊಂಡನು.

ಸಂಕೋಚದಿಂದ ಶ್ರೀನಾಥ ತೆಗೆದುಕೊಂಡನು. ಶಂಕರನ ನಡವಳಿಕೆ ಯನ್ನು ಕಂಡು ಶ್ರೀನಾಥ ಅಚ್ಚರಿಗೊಂಡಿದ್ದನು. ತನ್ನಂತಹ ಬಡ ಹುಡುಗ ನನ್ನು ಔದಾರ್ಯದಿಂದ ಕಂಡುದನ್ನು ನೆನೆಸಿಕೊಂಡು ಶಂಕರನಲ್ಲಿ ಗೌರವತೆ ಉಂಟಾಯಿತು.

ಸ್ವಲ್ಪ ಹೊತ್ತು ಮಾತುಗಳನ್ನು ಆಡುತ್ತಾ ಕಡೆಗೆ ಶ್ರೀನಾಥ ಹೊರಟು ನಿಂತನು, ಶಂಕರ ಹೇಳಿದ :

"ನಿಮಗೆ ಬಿಡುವಾದ ಹಾಗೆಲ್ಲಾ ಈ ಕಡೆಗೆ ಬಂದು ಹೋಗುತ್ತಿರಿ."

ಆಗಲೆಂದು ಹೇಳಿ ಶ್ರೀನಾಥ ಹೊರಗೆ ಹೊರಟನು.

ಶ್ರೀನಾಥ ಬಡ ಹುಡುಗನೆಂದು ತಿಳಿದ ನಂತರ ಶಂಕರನಿಗೆ, ಅವನಲ್ಲಿ ಕನಿಕರ ಉಂಟಾಯಿತು. ಅವನ ನಡತೆಯಲ್ಲೂ ಒಳ್ಳೆಯ ತನವನ್ನು ಕಂಡು ಸಂತೋಷ ಉಂಟಾಯಿತು. ಅವನಲ್ಲಿಲ್ಲದ ಪುಸ್ತಕಗಳನ್ನು ಎರವಲು ಕೊಡು ತ್ತಿದ್ದನು. ಸ್ವಲ್ಪ ದಿವಸಗಳಲ್ಲಿ ಶ್ರೀನಾಥ ಮನೆಯವರೆಲ್ಲರಿಗೂ ಪರಿಚಯ ವಾದನು.

## ೧೨

ಶಂಕರ ಆಗತಾನೆ ಹೊರಗೆ ಹೋಗಿದ್ದ. ಶ್ರೀನಾಥ ಶಂಕರನ ಪುಸ್ತಕ ವನ್ನು ಹಿಂದಿರುಗಿಸಲು ಅವನ ಮನೆಗೆ ಬಂದ. ಹೊರಗಡೆ ನಿಂತು ಅವನು 'ಶಂಕರ್' ಎಂದು ಕೂಗಿದ.

ಸ್ವಲ್ಪ ಹೊತ್ತಿನೊಳಗೆ ಶಾರದೆ ಹೊರಗೆ ಬಂದಳು. ಶ್ರೀನಾಥ ಬಂದಿರುವುದನ್ನು ಕಂಡು ನಾಚಿಕೆಯಿಂದ ಒಳಗೂಡಿದ ಧ್ವನಿಯಿಂದ 'ಅವನಿಲ್ಲ' ಎಂದು ಉತ್ತರಕೊಟ್ಟಳು. ಶ್ರೀನಾಥ ತಲೆತಗ್ಗಿಸಿ ಹೊರಗೆ ನಡೆದುಬಿಟ್ಟ.

ದಾರಿಯಲ್ಲಿ ಅವನಿಗೆ ಶಾರದೆಯ ನೆನಪು ಬಂತು. ಅವಳು ಮಾತನಾಡಿದ ಸಂಕೋಚ, ಅವಳ ಗಾಂಭೀರ್ಯ ಮತ್ತು ಅವಳ ರೂಪು ಅವನನ್ನು ಆಕರ್ಷಿಸಿತ್ತು. ಏನೋ ಒಂದು ವಿಧವಾದ ಪ್ರೀತಿ ಅವಳಲ್ಲಿ ಮೂಡಿತು. ತಾನು ಮಾಡುತ್ತಿರುವುದು ತಪ್ಪು....ಛೆ....ಹಾಗೆ ಸ್ನೇಹಿತನ ತಂಗಿಯನ್ನು ತಿಳಿಯಬಾರದು........ಮಹಾಪರಾಧ........ಎಂದುಕೊಂಡು ಆ ವಿಷಯವನ್ನು ಒದಿಗೊತ್ತಿ ಮನಸ್ಸನ್ನು ಬಲವಾಗಿ ಕೊಡವಿದನು. ಮತ್ತೆ ಒಂದು ವಾರ ಶಂಕರನ ಮನೆಗೆ ಅವನು ಹೋಗಲಿಲ್ಲ.

ಶಂಕರ ಶ್ರೀನಾಥನು ಬಾರದಿದ್ದುದನ್ನು ಕಂಡು ಅವನ ರೂಮಿಗೆ ಹೊರಟ. ಸ್ನೇಹಿತನಿಗೆ ಮುಖ ತೋರಿಸದೆ ತಾನು ಹಾಗೆ ಮಾಡಿದುದು ತಪ್ಪು ಎಂದು ಶ್ರೀನಾಥನ ಮನಸ್ಸು ಗಲಿಬಿಲಿಯಾಯಿತು.

ಒಂದು ದಿನ ಶ್ರೀನಾಥ ಶಂಕರ ಇಬ್ಬರೂ ಶಂಕರನ ಮನೆಯಲ್ಲಿ ಕುಳಿತು ಮಾತನಾಡುತ್ತಿದ್ದರು. ಅದೇ ವೇಳೆಗೆ ಸರಿಯಾಗಿ ಸಾವಿತ್ರಿಯೂ ಅತ್ತ ಬಂದಳು. ಶ್ರೀನಾಥನನ್ನು ಕಂಡ ಕೂಡಲೆ ಇದ್ದಕ್ಕಿದ್ದ ಹಾಗೆಯೇ ಒಂದು ವಿಷಯ ಹೊಳೆಯಿತು. ಒಂದು ಬಾರಿ ನಕ್ಕು ಸುಮ್ಮನಾದರೂ ಶ್ರೀನಾಥನಿಗೆ ಶಾರದೆಯನ್ನು ಕೊಟ್ಟು ವಿವಾಹವನ್ನೇಕೆ ಮಾಡಬಾರದೆಂದು ಅವರ ಮನಸ್ಸಿನಲ್ಲಿ ಹೊಳೆದ ಸೂಚನೆ. 'ಆಗಲಿ ಇನ್ನು ಕೆಲವು ದಿನಗಳು ಕಳೆಯಲಿ' ಎಂದು ಸುಮ್ಮನಾಗಿಹೋದರು.

ಶಂಕರನ ಓದು ಕೊನೆಯ ಹಂತವನ್ನು ಮುಟ್ಟಿತು. ಡಾಕ್ಟರ್ ಓದಿನ ಕಡೆಯ ವರ್ಷದ ಪರೀಕ್ಷೆ ಸಮೀಪಿಸಿತು. ಶಂಕರ-ಶ್ರೀನಾಥ ಕಷ್ಟಪಟ್ಟು ಶ್ರಮಿಸಿ ಓದಲಾರಂಭಿಸಿದರು. ಶಂಕರನಿಗೆ ಪರೀಕ್ಷೆಯಲ್ಲಿ ಯಶಸ್ಸಾಗಲು ಸಾವಿತ್ರಿ ಹಗಲಿರುಳೂ ದೇವರಲ್ಲಿ ಮೊರೆ ಇಡುತ್ತಿದ್ದಳು.

ಪರೀಕ್ಷೆಯನ್ನು ಮುಗಿಸಿ ಕೇಂದ್ರದಿಂದ ಶಂಕರ-ಶ್ರೀನಾಥ ಇಬ್ಬರೂ ಹೊರಬಿದ್ದರು.

ಅಂದು ಗುರುವಾರ ಶಂಕರ ತನ್ನ ಕೊಠಡಿಯಲ್ಲಿ ಯಾವುದೋ ಇಂಗ್ಲಿಷ್ ಕಾದಂಬರಿಯನ್ನು ಓದುತ್ತಾ ಕುಳಿತಿದ್ದನು. ಹೊರಗಡೆ ರಾಮ ಸ್ವಾಮಿಯವರು ಕುಳಿತು ಪುರಾಣ ಗ್ರಂಥಗಳನ್ನು ತಿರುವಿಹಾಕುತ್ತಿದ್ದರು. ಸಾವಿತ್ರಿ ಮಗನ ಕೊಠಡಿಗೆ ಬಂದಳು. ತಾಯಿ ಬಂದ ಶಬ್ದವನ್ನು ಕೇಳಿ ಶಂಕರ ಎದ್ದು ನಿಂತನು.

"ಏನು ಮಾಡುತ್ತಿದ್ದೆ ಶಂಕರಾ?" ಕೇಳಿದರು ಸಾವಿತ್ರಿ.

"ಯಾವುದೋ ಪುಸ್ತಕವನ್ನು ಓದುತ್ತಿದ್ದೆ."

"ಪರೀಕ್ಷೆಯಲ್ಲಿ ಹೇಗೆ ಮಾಡಿರುವಿ?"

"ಪರವಾಗಿಲ್ಲ. ಚೆನ್ನಾಗಿಯೇ ಮಾಡಿರುವೆನು."

"ನಂತರ ಏನು ಮಾಡಬೇಕು?"

"ಆರು ತಿಂಗಳು ಆಸ್ಪತ್ರೆಯಲ್ಲಿ ಟ್ರೈನಿಂಗ್ ಹಾಕ್ತಾರೆ ಆಮೇಲೆ ಅಲ್ಲೇ ಕೆಲಸಕ್ಕೆ ಸಂಬಳದ ಮೇಲೆ ತೆಗೆದು ಕೊಳ್ತಾರೆ."

"ಶಾರದೆ ಹೇಗೆ ಮಾಡಿದ್ದಾಳೆ ಪರೀಕ್ಷೆಯಲ್ಲಿ."

"ಅವಳೂ ಪಾಸಾಗ್ತಾಳೆ."

"ನೋಡು ಶಂಕರೂ, ಶಾರದೆಗೂ ಹದಿನಾಲ್ಕು ವರ್ಷ ಆಗ್ತಾ ಬಂತು. ಮದುವೆ ಮಾಡ್ಬೇಕು. ಎಷ್ಟು ದಿನ ಅಂತ ಇಟ್ಕೊಂಡಿರಕ್ಕಾಗುತ್ತೆ ಹೇಳು ಬೆಳೆದ ಹುಡುಗೀನ! ಅಪ್ಪಾ ಕೂಡ ಮುದುಕರಾಗಿ ಹೋಗಿದ್ದಾರೆ. ಓಡಾಡುವುದಕ್ಕೆ ಸಾಕಷ್ಟು ಬಲವಾಗಿಲ್ಲ.

"ಹೌದು....ಅದಕ್ಕೆ ನನ್ನಿಂದ ಏನಾಗುತ್ತೆ?"

"ನಿನ್ನಿಂದಲೂ ಸಾಧ್ಯ........ಆದಿರಲಿ ಆ ಶ್ರೀನಾಥನಿಗೆ ತಂದೆ ತಾಯಿಗಳ್ಯಾರು ಇಲ್ಲವೆ?"

"ಇಲ್ಲವಂತೆ ಪಾಠ ಹೇಳಿ ಸಂಪಾದನೆ ಮಾಡಿಕೊಂಡು ಓದಿದ್ದಾನೆ.

"ಅವನ ನಡತೆ, ಗುಣ ಹೇಗಿವೆ?"

"ಅವನು ಒಳ್ಳೆಯವನೇ. ಯಾರ ಜೊತೆಯಲ್ಲೂ ಅಷ್ಟಾಗಿ ತಿರುಗೊಲ್ಲ. ತಾನಾಯಿತು–ತನ್ನ ಪಾಡಾಯಿತು.

"ಅವನಿಗೆ ಎಷ್ಟು ವರ್ಷ?"

"ಸುಮಾರು ಇಪ್ಪತ್ತೆರಡು ಇರಬಹುದು."

"ಹಾಗಾದರೆ ಅವನೇಕೆ ನಮ್ಮ ಶಾರದೆಗೆ ಯೋಗ್ಯ ವರನಾಗಲಾರನು? ಎಂದು ಯೋಚಿಸುತ್ತಾ ಇದ್ದೇನೆ.

"ನೀನು ಹೇಳೋದೂ ಸರಿ. ಆದರೆ ಶ್ರೀನಾಥ ಇದಕ್ಕೆ ಒಪ್ಪಬೇಕಲ್ಲ!"

"ಒಪ್ಪದೆ ಏನು. ಕರೆದು ಕೇಳಿದರೆ ಆಯಿತು. ಒಂದು ಸಾರಿ ಕರೆದುಕೊಂಡು ಬಾ."

"ಆಗಲಿ ನಾಳೆ ಖಂಡಿತ ಕರೆತರುತ್ತೀನಿ."

ಒಳಗಿನಿಂದ ಶಾರದೆ ಅಮ್ಮನನ್ನು ಕೂಗಿದಳು. ಅಷ್ಟಕ್ಕೆ ಮಾತನ್ನು ಮುಗಿಸಿ ಸಾವಿತ್ರಿ ಒಳಗೆ ಹೊರಟುಹೋದಳು. ಶಂಕರ ಯೋಚಿಸಿದ. ಹೌದು....ಶ್ರೀನಾಥ ಸರ್ವ ವಿಧದಲ್ಲೂ ಶಾರದೆಗೆ ತಕ್ಕ ವರ. ಪಾಪ ಬಡವ, ಅವನಿಗೂ ಸರಿಯಾಗಿ ಶಾಂತಿ ದೊರೆಯುತ್ತೆ.

ಶಂಕರ ಎದ್ದು ಬಟ್ಟೆಧರಿಸಿ ಶ್ರೀನಾಥನ ರೂಮಿನತ್ತ ತೆರಳಿದ.

## ೨೮

ಹೇಳಿದ ಹೊತ್ತಿಗೆ ಸರಿಯಾಗಿ ಶ್ರೀಧರ ಶಂಕರನ ಮನೆಗೆ ಬಂದ. ಅವನಿಗಾಗಿ ಬಾಗಿಲಿನಲ್ಲಿ ನಿಂತು ಕಾಯುತ್ತಿದ್ದ ಶಂಕರ ಒಳಗೆ ಸ್ವಾಗತಿಸಿದ, ಒಳಗೆ ಕೂಡಿಸಿ ತಿಂಡಿಯ ತಟ್ಟೆಯನ್ನು ಇಟ್ಟನು. ರಾಮಸ್ವಾಮಿಗಳು ಮತ್ತು ಸಾವಿತ್ರಿಯೂ ಈರ್ವರೂ ಬಂದು ಕುಳಿತರು. ರಾಮಸ್ವಾಮಿಗಳೇ ಮಾತಿಗೆ ಮೊದಲು ಮಾಡಿದರು.

"ಶ್ರೀನಾಥ್ ನಿಮ್ಮನ್ನು ಒಂದು ವಿಷಯ ಕೇಳಬಹುದೆ?"

"ಅದಕ್ಕೇನಂತೆ. ಏನಿದ್ದರೂ ಹೇಳಿ ಕೇಳುತ್ತೇನೆ."

"ಬಹಳ ದಿನಗಳಿಂದಲೂ ನನ್ನ ಮನಸ್ಸಿಗೆ ಒಂದು ವಿಷಯ ಹೊಳೆಯುತ್ತಿತ್ತು.....ಏನೆಂದರೆ...."

ಕುತೂಹಲದಿಂದ ಏನನ್ನು ಹೇಳುವರೋ ಎಂದು ಕಾಯುತ್ತಾ ಕುಳಿತ ಶ್ರೀನಾಥ.

"ನಮ್ಮ ಶಾರದೆಗೆ ಹದಿನಾಲ್ಕು ವರ್ಷ ತುಂಬುತ್ತಾ ಬಂತು. ವಿವಾಹಕ್ಕೆ ಯೋಗ್ಯಳಾಗಿದ್ದಾಳೆ. ಅವಳಿಗೆ ವರ........"

"ನಾನು ಏನು ಮಾಡಬೇಕು ಹೇಳಿ."

"ನೀನು ವಿವಾಹವಾಗಲು ಒಪ್ಪಬೇಕು."

"ನಾ....ನೇ!" ಆಶ್ಚರ್ಯ, ಸಂಶಯದಿಂದ ಕೂಡಿ ಹೇಳಿದ ಶ್ರೀನಾಥ.

"ಹೌದು ನೀನೇ ನಿನ್ನಂತಹ ಯೋಗ್ಯ ವರನನ್ನು ಬಿಟ್ಟು ನನ್ನ ಮನಸ್ಸು ಬೇರೆಯುವರಲ್ಲಿಗೆ ಹೋಗದು."

ಶ್ರೀನಾಥ ಮೌನವಾಗಿ ಕುಳಿತು ಯೋಚಿಸುತ್ತಿದ್ದ. ಅವನ ಮೌನ ವನ್ನು ನೋಡಿ ಸಾವಿತ್ರಿಯು ಹೇಳಿದಳು.

"ಇದರಲ್ಲಿ ಯೋಚನೆಯೇನು? ನಿಮ್ಮ ಮನಸ್ಸಿಗೆ ಒಪ್ಪಿಗೆ ಇದೆಯೋ ಇಲ್ಲವೋ ಹೇಳಿಬಿಡಿ. ನಾವೂ ಬಡವರೇ. ಮದುವೆ ಖರ್ಚು ನಾವೇ ಹಾಕಿಕೊಂಡು ಐನೂರು ರೂಪಾಯಿ ನಿಮಗೆ ಬಳುವಳಿಯಾಗಿ ಕೊಡುತ್ತೇವೆ. ಒಂದು ಮಾತು ಸಾಕು. ಆಗುತ್ತೆ....ಅಥವಾ ಆಗೊಲ್ಲ....ಹೇಳಿಬಿಡಿ"

"ನೀವೇ ನನ್ನ ಹಿರಿಯವರಾಗಿರುವಾಗ ನಿಮ್ಮ ಮಾತಿಗೆ ಎದುರು ನುಡಿಯುವುದೇ?" ಶ್ರೀನಾಥ ಹೇಳಿದ.

ಅವನ ಸಮ್ಮತಿ ಸೂಚಕವಾದ ಉತ್ತರವನ್ನು ಕೇಳಿ ಎಲ್ಲರಿಗೂ ಹರ್ಷ ವಾಯಿತು.

ನಿಜವಾಗಿಯೂ ತಾನು ಶಾರದೆಯ ಕೈ ಹಿಡಿಯುವೆನೆ? ಅವಳ ಹಸ್ತ ವನ್ನು ಹಿಡಿಯಲು ನಾನು ಯೋಗ್ಯನೆ? ಎಂದು ತನ್ನಲ್ಲಿಯೇ ಶ್ರೀನಾಥನಿಗೆ ಆಶ್ಚರ್ಯವಾಯಿತು.

ರಾಮಸ್ವಾಮಿಗಳು ವಧೂವರರಾಗಲಿರುವ ಶಾರದೆ-ಶ್ರೀನಾಥರ ಜಾತಕ ಗಳನ್ನು ನೋಡಿಸಿದರು. ಒಂದು ದಿವಸ ಶುಭ ಲಗ್ನವನ್ನು ನಿಶ್ಚಯಿಸಿ ಲಗ್ನಕ್ಕೆ ಸಕಲ ಏರ್ಪಾಡುಗಳನ್ನು ಮಾಡಿಕೊಳ್ಳತೊಡಗಿದರು.

ವಿವಾಹದ ದಿನಗಳು ಉರುಳಿ ಬಂದಂತೆಲ್ಲಾ ಶ್ರೀನಾಥನಿಗೆ ತನಗೂ ಸ್ವರ್ಗಕ್ಕೂ ಎರಡೇ ಗೇಣು ದೂರ ಎಂದು ಅರಿವಾಯಿತು.

ಮದುವೆ ಸಾಕಷ್ಟು ವಿಜೃಂಭಣೆಯಾಗಿಯೇ ನಡೆಯಿತು. ಶಾರದೆ ಶ್ರೀನಾಥನ ಕೈ ಹಿಡಿದಳು.

ಶಂಕರ-ಶ್ರೀನಾಥರ ಪರೀಕ್ಷಾ ಫಲಿತಾಂಶಗಳು ಹೊರಬಿದ್ದುವು. ಇಬ್ಬರಿಗೂ ಮೊದಲನೆ ದರ್ಜೆಯಲ್ಲಿ ತೇರ್ಗಡೆಯಾಗಿತ್ತು.

ತಾನು ಪಾಸಾದುದು, ತಾನು ಕೈ ಹಿಡಿದ ಶಾರದೆಯ ಪುಣ್ಯದಿಂದಲೇ ಎಂದು ಊಹಿಸಿದ. ಆ ದಿವಸವೆಲ್ಲವೂ ಆನಂದದ ತಾಂಡವ ನೃತ್ಯದಲ್ಲಿ ಪರಿಸಮಾಪ್ತಿಯಾಯಿತು.

ಶಂಕರ, ಶ್ರೀನಾಥ ಇಬ್ಬರಿಗೂ ಆಸ್ಪತ್ರೆಯಲ್ಲಿ ಟ್ರೈನಿಂಗ್‌ಗೆ ಹಾಕಿದರು. ರೂಮಿನಲ್ಲಿದ್ದು ಒಂಟಿ ಬಾಳು ಸಾಗಿಸುವ ಕಷ್ಟವೇಕೆ ಎಂದು ಹೇಳಿ ಶ್ರೀನಾಥ ನನ್ನು ತಮ್ಮ ಮನೆಗೆ ಕರೆಸಿಕೊಂಡರು.

ಪ್ರತಿ ದಿವಸವೂ ಬಿಡುವಿಲ್ಲದ ಕೆಲಸ. ಬಂದು ಹೋದ ರೋಗಿಗಳಿಗೆ ಔಷಧಗಳನ್ನು ಕೊಡಬೇಕಿತ್ತು. ಇಬ್ಬರಿಗೂ ಬೇರೆ ಬೇರೆ ವಾರ್ಡ್‌ಗಳಲ್ಲಿ ನಿಯಮಿಸಿದ್ದರು.

## ೨೯

ಶ್ರೀನಿವಾಸಯ್ಯನಿಗೆ ಜೀವನ ಬೇಸರವಾದಂತಿಲ್ಲಾ ದಿವಸಗಳನ್ನು ಕಳೆಯುವುದೇ ಕಷ್ಟವಾಗಿತ್ತು. ತಾನು ಕೆಲಸ ಮಾಡುತ್ತಿದ್ದ ಮಿಲ್ ಕೆಲಸ ಅವನಿಗೆ ಬೇಸರ ಹುಟ್ಟಿಸಿತ್ತು. ಅಂದಿನ ನೆನಪುಗಳನ್ನು ಜ್ಞಾಪಿಸಿಕೊಂಡಾಗ ಲೆಲ್ಲಾ ಅವನಿಗೆ ಮನಸ್ಸು ತಾನು ಮಾಡಿದ್ದ ಕೆಲಸಕ್ಕೆ ರೋಷವಾಗುತ್ತಿತ್ತು. ಎಂತಹ ಅವಿವೇಕದ ಕಾರ್ಯ ಮಾಡಿ, ತನ್ನ ಜೀವನವನ್ನು ಹಾಳು ಮಾಡಿ ಕೊಂಡುದೂ ಅಲ್ಲದೆ ನಿಷ್ಕಾರಣವಾಗಿ ಹೆಂಡತಿ ಮಕ್ಕಳ ಜೀವನದ ಮೇಲೆ ಕಲ್ಲು ಹಾಕಿದುದನ್ನು ನೆನೆಸಿಕೊಂಡು ಅಳುತ್ತಿದ್ದನು. ಸಾವಿತ್ರಿ ತನಗೆ ಕಡಮೆಯಾದರೂ ಏನು ಮಾಡಿದ್ದಳು. ಅವಳ ಮುಗ್ಧ ಕೋಮಲ

ಹೃದಯವನ್ನು ಎಂತಹ ಈಟಿಯಿಂದ ತಿವಿದೆನೆಂದು ಗೋಳಿಡುತ್ತಿದ್ದನು. ಕೇವಲ ಹೊಟ್ಟೆಗಾಗಿ ಹೀಗೆ ದುಡಿಯಬೇಕಿತ್ತು. ಅಂತಹ ಹೆಂಡತಿ ಮಕ್ಕಳೇ ಇಲ್ಲದಿದ್ದಮೇಲೆ ತಾನು ಒರ್ವನೇ ಬದುಕಿದುದರ ಪ್ರಯೋಜನವಾದರೂ ಏನು? ಎಂದುಕೊಳ್ಳುತ್ತಿದ್ದನು.

ಒಂದುದಿನ ಶ್ರೀನಿವಾಸಯ್ಯ ತಾನು ಕೆಲಸ ಮಾಡುತ್ತಿದ್ದ ಮಿಷಿ ಮುಂದೆ ನಿಂತು ಹತ್ತಿಯ ರಾಶಿಯನ್ನು ಅವುಗಳಲ್ಲಿ ತುಂಬಿ ತುಂಡರಿಸುತ್ತಿದ್ದ. ಎರಡು ಲಾರಿ ಹತ್ತಿಗಳನ್ನು ಅವನು ನಯ ಮಾಡಬೇಕಿತ್ತು. ಒಂದನ್ನು ಮುಗಿಸಿ ಮತ್ತೊಂದನ್ನು ಅದರಲ್ಲಿ ತುಂಬುವುದಕ್ಕೆ ನಿಧಾನ ಮಾಡುತ್ತಿದ್ದನು.

ಅವನ ಮನಸ್ಸಿನಲ್ಲಿ ಯೋಚನಾ ತರಂಗಗಳು ಏಳುತ್ತಿದ್ದುವು. ತನ್ನ ಜೀವನವೂ ಕೇವಲ ಆ ಮಿಷಿ ಕೆಲಸ ಮಾಡುವ ಹಾಗೆ ನಿಸ್ಸಾರ ಜೀವನ ವೆಂದು ಯೋಚಿಸುತ್ತಿದ್ದನು. ಅವನ ಮನಸ್ಸಿನ ಎದುರಿಗೆ ಸಾವಿತ್ರಿಯು ಸುಳಿದಾಡುತ್ತಿದ್ದಳು.

ಬೇಗ ಕೆಲಸ ಮುಗಿಸಬೇಕೆಂದು ಜಾಗ್ರತೆ ಮಾಡತೊಡಗಿದನು. ಯೋಚನೆಯಲ್ಲಿಯೇ ಅವನ ಮನಸ್ಸು ತೇಲಿಹೋಗುತ್ತಿತ್ತು. ಅಷ್ಟರಲ್ಲಿ ಅವನ ಬಲಗಾಲು ಅವನಿಗೆ ತಿಳಿಯದಂತೆಯೇ ಮಿಷಿ ಜೊತೆಗೆ ತಿರುಗುತ್ತಿದ್ದ ಗಾಲಿಗೆ ತಗುಲಿತು. ಕಾಲು ಗರಗರನೆ ಚಕ್ರದಂತೆ ತಿರುಗಿ ಮುರಿದು ಹೋಯಿತು. 'ಅಯ್ಯೋ' ಎಂದು ಕೂಗಿಕೊಂಡು ಆಯತಪ್ಪಿ ಅವನು ಮಿಷಿ ಮೇಲೆ ಉರುಳಿದನು, ವೇಗವಾಗಿ ತಿರುತ್ತಿದ್ದ ಆ ಮಿಷಿ ಬಿರುಸಿಗೆ ಅವನ ಸತತ ದೇಹವೂ ತಿರುಗಿ ಪ್ರಜ್ಞೆಯಿಲ್ಲದ ಹಾಗೆ, ಅವನ ದೇಹವು ನೆಲದ ಮೇಲೆ ಬಿದ್ದುಬಿಟ್ಟಿತು. ದೂರದಲ್ಲಿ ಕೆಲಸ ಮಾಡುತ್ತಿದ್ದ ಕೆಲಸ ಗಾರರು ಓಡಿ ಬಂದು ಮಿಷಿ ವಿದ್ಯುತ್ ಗುಂಡಿಯನ್ನು ನಿಲ್ಲಿಸಿ ಅವನನ್ನು ಎತ್ತಿ ಮಲಗಿಸಿದರು. ಅವನ ದೇಹವೆಲ್ಲವೂ ರಕ್ತಮಯವಾಗಿಹೋಗಿತ್ತು. ಕೂಡಲೆ ವ್ಯಾನಿನಲ್ಲಿ ಅವನನ್ನೆತ್ತಿಕೊಂಡು ಆಸ್ಪತ್ರೆಗೆ ಕರೆದೊಯ್ದರು.

ಪ್ರಮುಖ ವೈದ್ಯರು ಬಂದು ವೈದ್ಯಕೀಯ ಪರೀಕ್ಷೆಯನ್ನು ನಡೆಸಿದರು. ಪಕ್ಕದ ವಾರ್ಡ್‌ನಲ್ಲಿ ಇದ್ದ ಶ್ರೀನಾಥ-ಶಂಕರ, ಇಬ್ಬರೂ ಹೊಸ ಕೇಸನ್ನು

ನೋಡಲು ಬಂದರು. ಶಂಕರ ಮುಂದೆ ಬಂದು ಆ ರೋಗಿಯ ಮುಖವನ್ನು ನೋಡಿದ. ಹಿಂದಿನ ಯಾವುದೋ ನೆನಪುಗಳು ಬರತೊಡಗಿದವು.... ಹೌದು ಅದೇ ಮುಖ.......ಅವರು ತನ್ನ ತಂದೆಯೇ!

ಬಿರುಗಾಳಿಗಿಂತಲೂ ವೇಗವಾಗಿ ಶಂಕರ ಮನೆಗೆ ಓಡಿಹೋದ. ಸಾವಿತ್ರಿಗೆ ಸೂಕ್ಷ್ಮವಾಗಿ ತಿಳಿಸಿದನು. ಗಾಬರಿಯಿಂದ ಸಾವಿತ್ರಿ, ತಂದೆ ಯೊಡನೆ ಆಸ್ಪತ್ರೆಗೆ ಧಾವಿಸಿದಳು.

ಮಂಚದ ಮುಂದೆ ಬಂದು ಮುಖವನ್ನು ವೀಕ್ಷಿಸಿದಳು. ಹೌದು ಅವರೇ....ತನ್ನ ಪತಿ........ಎಷ್ಟೋ ವರ್ಷಗಳು ಕಷ್ಟಪಟ್ಟಿದ್ದಕ್ಕಾಗಿ ಸಿಕ್ಕುಗಟ್ಟಿಹೋದ ಮುಖ. ಮುಖದ ಮೇಲೆಲ್ಲಾ ದಟ್ಟವಾದ ಕಾಡಿನಂತೆ ಬೆಳೆದಿರುವ ಕೂದಲುಗಳು....ದೃಷ್ಟಿಸಿ ನೋಡಿದಳು....ಅವರೇ ತನ್ನ ಪತಿ....

ಸಾವಿತ್ರಿಯ ತಲೆ ಸುತ್ತಲಾರಂಬಿಸಿತು. ಶ್ರೀನಿವಾಸಯ್ಯ ದೀರ್ಘ ನಿದ್ರೆಯನ್ನು ಆಶ್ರಯಿಸಿದ್ದ ಆವನ ಪ್ರಾಣ ಪಕ್ಷಿಯು ಹೆಂಡತಿಯ ಮುದ್ದು ಮುಖವನ್ನು ನೋಡುವುದಕ್ಕೆ ಮುಂಚೆಯೇ ಹಾರಿಹೋಗಿತ್ತು.

ಸಾವಿತ್ರಿ ಗಂಡನನ್ನು ಅಲುಗಿಸಿದಳು. ಮುಖವನ್ನು ಅಲುಗಿಸಿದಳು. ಮೈಯೆಲ್ಲಾ ತಣ್ಣಗಾಗಿತ್ತು. ಸತ್ತುಹೋದರೆಂದು ಖಚಿತವಾಗಿ ಅವಳಿಗೆ ತಿಳಿಯಿತು. ಎಲ್ಲರ ಕಣ್ಣಲ್ಲೂ ನೀರು ಧಾರಾಕಾರವಾಗಿ ಸುರಿಯುತಿತ್ತು. ಸಾವಿತ್ರಿ ಎದ್ದು ನಿಂತುಗೊಳ್ಳಲಾರಂಬಿಸಿದಳು. ಆದರೆ ಅದು ಸಾಗಲಿಲ್ಲ. "ಆಯ್ಯೋ ನನ್ನ ಸ್ವಾಮೀ" ಎಂದು ಕಿರುಚಿ ಸಾವಿತ್ರಿ ಶ್ರೀನಿವಾಸಯ್ಯನ ದೇಹದ ಮೇಲೆ ಬಿದ್ದುಬಿಟ್ಟಳು.

---

# ನಮ್ಮ ಪ್ರಕಟಣೆಗಳು

## ಹಳ್ಳಿಯ ಚೆಲುವೆ

(ಕಾದಂಬರಿ)

ಲೇ. ವಿಜಯನಾರಸಿಂಹ.

ಬೆಲೆ ೧೨ ಆಣೆ.

(ತ್ರಿವರ್ಣರಂಜಿತ ಮುಖಚಿತ್ರ)

## ಸಾಹಿತ್ಯ ಮಂದಿರದಲ್ಲಿ

ಲೇ. ವಿಠಲ್‌ರಾವ್

ಬೆಲೆ ೧ ರೂ.

(ತ್ರಿವರ್ಣರಂಜಿತ ಮುಖಚಿತ್ರ)

## ಕೊಲೆಯ ರಹಸ್ಯ

(ಪತ್ತೇದಾರಿ)

ಲೇ. ಎನ್. ನರಸಿಂಹಯ್ಯ

ಬೆಲೆ ೧ ರೂ.

## ಫ್ಯಾಮಿಲಿ ಡಾಕ್ಟರ್

(ಲೇ. ಕಂಠೀರವ)

ಮತ್ತು

## ಪತ್ತೇದಾರ್ ಶೇಷು

ಲೇ. ಪ್ರಾ. ಕೃ. ದೊರೆಸ್ವಾಮಿ B. Sc.

(ಎರಡು ರಮ್ಯ ಪತ್ತೇದಾರಿ ಕಾದಂಬರಿಗಳು)

ತ್ರಿವರ್ಣರಂಜಿತ ಮುಖಚಿತ್ರ.

ಬೆಲೆ ೧೨ ಆಣೆ.

# ನಮ್ಮ ಪ್ರಕಾಶನದ ಮುಂಬರುವ ಕೃತಿಗಳು



ಶ್ರೀ ಚಂದ್ರಶೇಖರ ಆರಾಧ್ಯರವರಿಂದ
ಇತಿಹಾಸಿಕ ಹಿನ್ನೆಯು ಮೇಲೆ ವಿರಚಿತವಾದ ಕಾದಂಬರಿ

## ರುಂಡದ ಚೆಂಡಾಟ

ಪುಟಗಳು ೩೦೦ ಬೆಲೆ ೧-೮-೦



ಶ್ರೀ ಪಿ. ವಿಠಲರಾವ್‌ರವರ

## 'ರವೀಂದ್ರ'

ಎರಡನೆಯ ವಿಶ್ವ ಸಂಗ್ರಾಮದ ದುರಂತಕ್ಕೆ ಸಿಕ್ಕಿ
ಬೆಂದು ಬಸವಳಿದು ವಿಶ್ವ ಶಾಂತಿಗಾಗಿ
ಹೋರಾಡಿದ ವೀರನೊಬ್ಬನ
ಜೀವನವನ್ನು ಹೃದಯಂ
ಗಮವಾಗಿ ಚಿತ್ರಿಸಿ
ರುವ ಸಾಮಾ
ಜಿಕ
ಕಾದಂಬರಿ.

ಪುಟಗಳು ೩೦೦ ಬೆಲೆ ೧-೮-

# ಈ ಕೃತಿಯ ಬಗ್ಗೆ

ಸಾವಿತ್ರಿ-ಶ್ರೀನಿವಾಸಯ್ಯನವರದು ಜಕ್ಕವಕ್ಕಿ ಗಳಂಥ ಚೊಕ್ಕ ಸಂಸಾರ. ವಸಂತಮಾಸವು ಉದಿಸಿದ್ದ ಸ್ವರ್ಗದ ನಂದನವನ.

**ಆದರೆ ?**

ಬಂದಳು ರಾಧಾ !

ಕಾಮದೇವ ತನ್ನ ಪುಷ್ಪಾಸ್ತ್ರವನ್ನು ರಾಧಾ-ಶ್ರೀನಿವಾಸಯ್ಯನ ಮೇಲೆ ಹೂಡಿಬಿಟ್ಟ.

ಅಗ್ನಿಗೆ ಆಹುತಿಯಾಗಿ ಬೀಳುವ ಕಟ್ಟಡದಂತೆ ಸಿಡಿಲಿಗೆ ಎದೆ[illegible] ಉರುಳುವ ಮರದಂತೆ— ಆ ಸಂಸಾರ [illegible] ನಾಶವಾಗಿಹೋಯಿತು.

ರಾ[illegible] ಕಡೆಗೆ ಏನಾದಳು ?

ಸಾವಿತ್ರಿ [illegible] ಒಂದು ಸೇಲಿ ಹಿಡಿದರು ನಿಜ ! ಆದರೆ ಅವರ ಸೌಂದರ್ಯ [illegible]

ಹೇಗಿರಬಹುದು ?....ಎಂತಿರಬಹುದು ?

# ಈ ಕೃತಿಯ ಬಗ್ಗೆ

ಸಾವಿತ್ರಿ-ಶ್ರೀನಿವಾಸಯ್ಯನವರದು ಚಕ್ಕವಕ್ಕಿಗಳಂತಹ ಚೊಕ್ಕ ಸಂಸಾರ. ವಸಂತಮಾಸವು ಉದಿಸಿದ್ದ ಸ್ವರ್ಗದ ನಂದನವನ.

**ಆದರೆ?**

ಬಿರುಗಾಳಿಯಂತೆ ಬೀಸಿಬಂದಳು ರಾಧಾ!

ಕಾಮದೇವ ತನ್ನ ಪುಷ್ಪಾಸ್ತ್ರವನ್ನು ರಾಧಾ-ಶ್ರೀನಿವಾಸಯ್ಯನ ಮೇಲೆ ಹೂಡಿಬಿಟ್ಟ.

ಅಗ್ನಿಗೆ ಆಹುತಿಯಾಗಿ ಬೀಳುವ ಕಟ್ಟಡದಂತೆ ಸಿಡಿಲಿಗೆ ಎರಗಿ ಕೆಳಗುರುಳುವ ಮರದಂತೆ— ಆ ಸಂಸಾರ ನುಚ್ಚುನುರಿಯಾಗಿಹೋಯಿತು.

ರಾಧ—ವಿಷಸರ್ಪದಂತೆ—ಕಡೆಗೆ ಏನಾದಳು?

ಸಾವಿತ್ರಿ [illegible] ಒಂದು ನೆಲೆ ಹಿಡಿದರು ನಿಜ! ಆದರೆ ಅವರ ಸೌಂದರ್ಯದುದ್ಯಾನ?

ಹೇಗಿರಬಹುದು?....ಎಂತಿರಬಹುದು?